

ನಮ್ಮಮ್ಮ ಶಾರದೆ ಉಮಾಮಹೇಶ್ವರಿ
ನಿಮ್ಮೊಳಗಿಹನಾರಮ್ಮ ॥ ಪ ॥

ಕಮ್ಮಗೋಲನ ವೈರಿಸುತನಾದ ಸೊಂಡಿಲ
ಹೆಮ್ಮೆಯ ಗಣನಾಥನೆ ॥ ಅ. ಪ. ॥

ಮೋರೆ ಕಪ್ಪಿನ ಭಾವ ಮೊರದಗಲದ ಕಿವಿ
ಕೋರೆ ದಾಡೆಯು ನಾರಮ್ಮ
ಮೂರು ಕಣ್ಣನ ಸುತ ಮುಂದಿಟ್ಟ ಚಂದ್ರನ
ಧೀರ ತಾ ಗಣನಾಥನೆ ॥ ೧ ॥

ಉಟ್ಟ ಪಟ್ಟೆಯ ಬಿಗಿದುಟ್ಟ ಚೆಲ್ಲಣದ
ದಿಟ್ಟ ತಾನಿವನಾರಮ್ಮ
ಪಟ್ಟದ ರಾಣಿ ಪಾರ್ವತಿಯ ಕುಮಾರನು
ಹೊಟ್ಟೆಯ ಗಣನಾಥನೆ ॥ ೨ ॥

ರಾಶಿವಿದ್ಯೆಯ ಬಲ್ಲ ರಮಣಿ ಹಂಬಲನೊಲ್ಲ
ಭಾಷಿಗನಿವನಾರಮ್ಮ
ಲೇಸಾಗಿ ಜನರ ಸಲಹುವ ಕಾಗಿನೆಲೆಯಾದಿ
ಕೇಶವದಾಸ ಕಾಣಮ್ಮ ॥ ೩ ॥

— ಶ್ರೀ ಕನಕದಾಸರು

# ಓದುಗರ ಓಲೆ

ಮಾನ್ಯರೆ;

ತಮ್ಮ ಜುಲೈ ತಿಂಗಳ ಸಂಚಿಕೆಯಲ್ಲಿ ವಿಶ್ವಮಾನ್ಯತೆಗೆ ಅರ್ಹತೆ ಪಡೆದ ಅನ್ನಮಾಚಾರ್ಯರ ಸಂಗೀತೋತ್ಸವದ ಲೇಖನ ಮತ್ತು ಆ ಬಗೆಗಿನ ಚಿತ್ರಗಳು ತುಂಬಾ ಚೆನ್ನಾಗಿ ಬಂದಿವೆ. ಇನ್ನೂ ಮುಂದೆಯೂ ಪತ್ರಿಕೆಯು ಇದೇ ರೀತಿ ಹೆಚ್ಚು ಹೆಚ್ಚಾಗಿ ಶೋಭಿಸಲಿ ಎಂದು ಹಾರೈಸುತ್ತೇನೆ.

ಮತಿಘಟ್ಟ ಕೃಷ್ಣಪ್ಪ, ಭದ್ರಾವತಿ.

ಮಾನ್ಯರೆ;

ಸಪ್ತಗಿರಿ ಸಂಚಿಕೆ ಈಗ ಆಯಾತಿಂಗಳ ಮೊದಲವಾರದಲ್ಲಿ ಸೇರುವುದರಿಂದ ಓದುಗರಿಗೆ ಸಂತಸ. ಜುಲೈ ತಿಂಗಳ ಸಂಚಿಕೆಯ ಮುಖ ಚಿತ್ರ: ವಾಗ್ಗೇಯಕಾರರೊಂದಿಗೆ ಶ್ರೀ ವೆಂಕಟೇಶ್ವರಸ್ವಾಮಿಯ ನೃತ್ಯಭಂಗಿ ತುಂಬಾ ಭಕ್ತಿ ಪೋಷಕವಾಗಿತ್ತು. ಶ್ರೀ ವೆಂಕಟೇಶ್ವರ ಅನ್ನಮಾಚಾರ್ಯ ಸಂಗೀತೋತ್ಸವದ ಸಚಿತ್ರ ವರದಿಯೂ ಅಲ್ಲಲ್ಲಿ ಹಿನ್ನೆಲೆಯಾಗಿ ಬಳಸಿದ ಖ್ಯಾತ ಕವಿ ಗಾಯಕ ಭಕ್ತರ ಮಾತು, ಚಿತ್ರಗಳೂ ಒಟ್ಟಿಗೆ ಓದುಗರಾದ ನಾವೂ ಈ ಸಮಾರಂಭದಲ್ಲಿ ಪ್ರತ್ಯಕ್ಷ ಪಾಲುಗೊಂಡಷ್ಟು ಆನಂದವನ್ನುಂಟುಮಾಡಿದವು. ವಂದನೆಗಳು.

ಎಸ್. ಟಿ. ಮುನಿಸ್ವಾಮಿಗೌಡ, ಶ್ಯಾಗತ್ತೂರು.

ಮಾನ್ಯರೆ;

ಜುಲೈ ತಿಂಗಳಿನ ಚಿತ್ರಮಯವರದಿ, ಮುಖಚಿತ್ರ, ಸಂತಸವನ್ನು ತಂದವು. ಶ್ರೀ ಗುರುನಾಥ ಇನಾಮದಾರರು ಬರೆದ ಪ್ರದಕ್ಷಿಣೆಯ ರಹಸ್ಯ ವಿಚಾರ ಪ್ರಚೋದಕವಾಗಿದೆ. ಇಂತಹ ಹಲವು ಲೇಖನಗಳ ಮೂಲಕ ಹಿಂದೂ ಧರ್ಮದ ಯಾಕೆ–ಏನುಗಳ ಪರಿಚಯ ಮಾಡಿ ಕೊಡಬೇಕೆಂದು ವಿನಂತಿ.

ಎ. ಎಂ. ಶ್ರೀನಿವಾಸ, ಕೋಲಾರ.

ಮಾನ್ಯರೆ;

ಜೂನ್ ತಿಂಗಳ ಸಂಚಿಕೆಯಲ್ಲಿ ಕಾಖಂಡಕೀ ಕೃಷ್ಣದಾಸರನ್ನು ಕುರಿತಂತೆ ಉಪಯುಕ್ತವಾಗ ಲೇಖನವನ್ನು ಬರೆದಿರುವ ಶ್ರೀವಿದ್ವಾನ್ ಭೀಮಾಚಾರ್ಯಗುಡಿ ಅವರಿಗೆ ನನ್ನ ವಂದನೆಗಳು. ಶ್ರೀಕೃಷ್ಣದಾಸರ ತಂದೆಯಾದ ಶ್ರೀಮಹಿಪತಿರಾಯರನ್ನು ಬಲ್ಲವರೂ ಹೆಚ್ಚು ಜನವಿರ ಲಾರರು. ಈತಂದೆ ಮಕ್ಕಳು ಬಿಜಾಪುರದ ಆದಿಲಷಹ ಕಾಲದಲ್ಲಿ ಹರಿದಾಸ ಸಾಹಿತ್ಯವನ್ನು ಉಳಿಸಿಕೊಂಡು ಬೆಳೆಸಿದ ಮಹನೀಯರು ಕಾಖಂದಿಕಿ ಯಲ್ಲಿರುವ ಈ ಇಬ್ಬರ ವೃಂದಾವನಗಳನ್ನೂ ಲೇಖನದೊಂದಿಗೆ ಪ್ರಕಟಿಸಿದ್ದರೆ ಚೆನ್ನಾಗಿರುತ್ತಿತ್ತು.

ಡಾ॥ ಜಿ. ವರದರಾಜರಾವ್, ಮೈಸೂರು.



ಗೌರವ ಸಂಪಾದಕರು:
ಎಸ್. ಲಕ್ಷ್ಮೀನಾರಾಯಣ ಐ.ಎ.ಎಸ್.,

ಸಂಪಾದಕ:
ಕೆ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ:
ಪಿ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ:
ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲೆ ತಿರುಪತಿ ದೇವಸ್ಥಾನ
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**

ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. —ಸಂ॥

ಸಂಪುಟ ೧೬] ಸೆಪ್ಟೆಂಬರ್ ೧೯೮೫ [ಸಂಚಿಕೆ ೪

# ವಿಷಯಸೂಚಿ



ಮುಖ ಚಿತ್ರ: ಶ್ರೀ ಕೃಷ್ಣ — ಚಿತ್ರ: ಶ್ರೀ ಕೆ. ಜಗದೀಶ
ಹಿಂಬದಿಯಲ್ಲಿ: ಪಂಚಮುಖಿ ಗಣಪತಿ ಶಿಲ್ಪ
ಒಳಗಡೆಯಲ್ಲಿ: ತಿರುಮಲೆಯ ವಸಂತೋತ್ಸವದ ತೆಪ್ಪೋತ್ಸವ.
ಉಡುಪಿಯ ಶ್ರೀ ಕೃಷ್ಣ ದೇವಾಲಯ ರಥ

## ಸಂಪಾದಕೀಯ

ಅನುಮಾನವೆನ್ನುವುದುಂಟಾದರೆ ಅನರ್ಥಕ್ಕೆ ದಾರಿತೆಗೆದಂತೆ, ಆಲೋಚನೆ ಎಲ್ಲಿಯವರೆಗೆ ಹೋಗುವುದೋ ತಿಳಿಯದು. ಇದು ಸಾಮಾನ್ಯವಾಗಿ ಎಲ್ಲ ವಿಷಯಗಳಲ್ಲೂ ನಿಜವೇ ಅನ್ನಿಸುತ್ತದೆ.

ಕೃಷ್ಣಾವತಾರದ ವಿಷಯದಲ್ಲಿ ಚಿಂತಿಸಿದರೆ ಭಾರತದ ಕೃಷ್ಣ ಹಾಗೂ ಭಾಗವತದ ಕೃಷ್ಣ ಒಬ್ಬೇ ವ್ಯಕ್ತಿಯಲ್ಲ ಎನ್ನುವ ಅನುಮಾನವುಂಟಾಗುತ್ತದೆ ಹಲವರಿಗೆ. ಇದಕ್ಕೆ ಕಾರಣ ಭಾರತದ ಕೃಷ್ಣ ಒಬ್ಬ ಅತ್ಯುತ್ತಮ ಮುತ್ಸದ್ದಿ, ಯುದ್ಧ ನೀತಿ ವಿಶಾರದನಂತೆ ಕಂಡುಬಂದರೆ ಭಾಗವತದಲ್ಲಿ ಆತನ ವೈಯಕ್ತಿಕ ಜೀವನ; ಆ ಜೀವನಾನುಭವದ ಕಷ್ಟಸುಖಗಳೂ ಲೀಲಾ ವಿಶೇಷಗಳೂ ಕಂಡು ಬರುತ್ತವೆ. ಆತನ ದೈವೀಶಕ್ತಿ ನಾರಾಯಣಾವತಾರ ನಿರೂಪಣೆ ಭಾರತದಲ್ಲಿ ಪರಮಾಣು ರೂಪದಲ್ಲಿದ್ದರೆ, ಭಾಗವತದಲ್ಲಿ ಪರ್ವತಾಕಾರವಾಗಿ ಪ್ರಕಾಶಿಸುತ್ತದೆ. ಎಂತಲೇ ಹಲವರು ಈ ಎರಡೂ ಕೃಷ್ಣಪಾತ್ರಗಳೂ ಬೇರೆ ಬೇರೆಯೆಂದು ಭಾವಿಸಿದ್ದೇ ಅಲ್ಲದೆ ಭಾಗವತ ವ್ಯಾಸಕೃತವಲ್ಲ ಎನ್ನುವವರೆಗೆ ಹೋದರೆಂದರೆ ಅಷ್ಟು ಆಶ್ಚರ್ಯ ಪಡಬೇಕಾದ್ದಿಲ್ಲ.

ಈ ಸಂಶಯ ಇಷ್ಟರಿಂದ ಕೊನೆಗೊಂಡಿದ್ದಲ್ಲಿ ಚೆನ್ನಾಗಿರುತಿತ್ತು. ಮೊದಲಿಗೆ ಕೃಷ್ಣಾರ್ಜುನ ಸಂವಾದ ರೂಪದ ಭಗವದ್ಗೀತೆ ವ್ಯಾಸಕೃತವಲ್ಲವೆಂದು, ನಂತರದ ವಸ್ತುವನ್ನು ಮೂಲದೊಳಗೆ ಸೇರಿಸಿದರೆಂದೂ ವಾದಿಸುವವರೆಗೆ ಮುಂದುವರೆದಿದೆ. ಈ ಆಧ್ಯಾತ್ಮಿಕ ಬೋಧನೆಗೆ ರಣರಂಗ ಯುಕ್ತಸ್ಥಳವಲ್ಲವೆಂದೂ, ಈ ಬಾವ ಮೈದುನರು ಆಧ್ಯಾತ್ಮಿಕ ಸಲ್ಲಾಪದಲ್ಲಿ ನಿಜವಾಗಿಯೂ ತೊಡಗಿರುವಲ್ಲಿ ಕೌರವರು ಕೈಕಟ್ಟಿ ಕುಳಿತುಕೊಳ್ಳುವುದಿಲ್ಲವೆಂದೂ, ಮೇಲಾಗಿ ವಿಷಯಧ್ರಷ್ಟ್ಯಾ ಶಿಸಹ ರಣರಂಗದಲ್ಲಿ ಈ ಬೋಧೆ ಸಹಜತ್ವಕ್ಕೆ ಲೋಪಬರುವುದೆಂದೂ ಕಾರ್ಯಕಾರಣವಾದಿಗಳ ಹೇಳಿಕೆ.

ಸ್ವಲ್ಪ ಮಟ್ಟಿಗಿನ ತಾಳ್ಮೆ ಹೊಂದಿ ಸೂಕ್ಷ್ಮವಾಗಿ ಆಲೋಚಿಸಿದರೆ ಗೀತಾಬೋಧನೆಗೆ ಅದಕ್ಕಿಂತ ಪ್ರಶಸ್ತವಾದ ಸ್ಥಳವಾಗಲೀ, ಕಾಲವಾಗಲೀ ಬೇರೆ ದೊರೆಯದು ಎಂಬುದು ಸ್ಪಷ್ಟವಾಗುತ್ತದೆ.

ರಾಜಕೀಯವಾಗಿ ಕುರುಕ್ಷೇತ್ರ ಯುದ್ಧದಿಂದ ಕೌರವರಿಗೆ ಹೆಚ್ಚಿನ ಪ್ರಯೋಜನವಿಲ್ಲ. ಪಾಂಡವರಿಂದ ಪಡೆಯಬೇಕಾದ್ದಷ್ಟನ್ನೂ ಸ್ವಾಧೀನ ಪಡಿಸಿಕೊಂಡು ಅನುಭವಿಸುತ್ತಲೇ ಇರುವುದರಿಂದ ತಾವೇ ಮುನ್ನುಗ್ಗಿ ಯುದ್ಧ ಆರಂಭಿಸಬೇಕಾದ ಅಗತ್ಯವಿಲ್ಲ. ತಮಗಾದ ಅವಮಾನ ಅಪರಾಧ ಅನ್ಯಾಯಗಳನ್ನು 13 ವರ್ಷ ತಡೆದುಕೊಂಡು ತೊಂದರೆಗೀಡಾದ ಪಾಂಡವರೇ ಕೃಷ್ಣರಾಯಭಾರ ವಿಫಲವಾದ ನಂತರ ಯುದ್ಧ ಪ್ರಕಟನೆ ಮಾಡಬೇಕಾಯಿತು. ಆದ್ದರಿಂದ ಇದು ಕೌರವರಿಗೆ ಅನುಕೂಲಕರ ಪರಿಸ್ಥಿತಿ. ತಾವೇ ಯುದ್ಧ ಆರಂಭಿಸಿ ಜನನಷ್ಟ ಹೊಂದುವುದು ವಿಜ್ಞತೆಯಲ್ಲವಾಗಿಯೂ, ರಣ ಪಂಡಿತನೂ, ಕುರುವೃದ್ಧನೂ, ರಣ ನೀತಿ ಪ್ರವೀಣನೂ ಆದ ಸೇನಾಧಿಪತಿ ಭೀಷ್ಮನ ನಾಯಕತ್ವದಲ್ಲಿನ ಸೇನೆ ಯುದ್ಧ ಆರಂಭಿಸಿರದು, ಯುಕ್ತ ಘೋಷಣೆಗಳ ಮೊದಲು.

ಇದಲ್ಲದೆ ನಿರಾಯುಧರೊಂದಿಗೂ, ಅಸನ್ನದ್ಧರೊಂದಿಗೂ ಯುದ್ಧ ನಿಷಿದ್ಧವೆಂಬುದು ಆ ದಿನಗಳ ಸಮರ ಧರ್ಮ, ಸರಿ ಸುಮಾರು ಸೌಪ್ತಿಕದವರೆಗೂ ನಡೆದು ಬಂದಿದೆ. ಮೇಲಾಗಿ ಕೃಷ್ಣಾರ್ಜುನ ಸಂವಾದವನ್ನು ಅಂತರ್ನಿಹಿತ ಶಾಂತಿ ಪ್ರಯತ್ನವೆಂದೂ ಕೌರವರು ಭಾವಿಸಿದ ದಾಖಲೆಗಳಿವೆ. ಎಂತಲೇ ಕೌರವರು ಧಾಳಿಯನ್ನಾರಂಭಿಸಲಿಲ್ಲ. ಇಂತಹ ನಿಯಮಗಳ ಮಿತಿಯಿರುವ ಯುದ್ಧದ ಮೊದಲು ಕೃಷ್ಣನಿಗೆ ಗೀತೆಯ ಬೋಧನೆಗೆ ಸಮಯ ದೊರಕಿದ್ದರಲ್ಲಿ ಆಶ್ಚರ್ಯವೂ ಇಲ್ಲ ; ಅಸಹಜತೆಯೂ ಇಲ್ಲ. ಇನ್ನು ಗೀತಾಬೋಧನೆಗೆ ರಣರಂಗ ತಕ್ಕ ಪ್ರಾಂಗಣವಲ್ಲವೆನ್ನುವ ಮಾತು.

ಯುದ್ಧಕ್ಕೆ ಸಿದ್ಧವಾಗಿ ಏಳಕ್ಷೋಹಿಣೀ ಸೈನ್ಯದೊಡನೆ ಆಹವರಂಗಕ್ಕೆ ಅಡಿಯಿಟ್ಟ ಪಾರ್ಥ ಆ ಸಮಯದಲ್ಲಿ ಹಿಂಜರಿದಿದ್ದು ಕೇವಲ ಅರ್ಜುನನಿಗೇ ಅಲ್ಲ, ಇಡೀ ರಾಜಲೋಕದ ಹುಟ್ಟಿಗೇ ಅಳಿಸಲಾಗದ ಕಳಂಕ. ಧರ್ಮ ನಿರ್ವಹಣೆಯಲ್ಲಿ ಪಲಾಯನವಾದ ಪ್ರವೇಶಿಸಿದರೆ ನೈತಿಕ ಸಾಮಾಜಿಕ ಮೌಲ್ಯಗಳು ನಿರ್ನಾಮವಾಗುತ್ತವೆ. ಆದ್ದರಿಂದ ಅರ್ಜುನನು ಸ್ವಕರ್ಮ ಮಾರ್ಗಕ್ಕೆ ಹಿಂದಿರುಗುವುದು ಅತ್ಯಗತ್ಯ. ಪಾಪಪುಣ್ಯಗಳು ಪಾಂಚಭೌತಿಕ ದೇಹದಿಂದಾಗಿಯೇ ಉಂಟಾಗುವುದರಿಂದ, ದೇಹವೇ ಆತ್ಮವಲ್ಲವೆಂದು, ಹೇಳುತ್ತ ಪ್ರಾಸಂಗಿಕವಾಗಿ, ಭಗವಂತನನ್ನು ಸೇರಲು ಇರುವ ಎಲ್ಲ ವಿಧಾನಗಳನ್ನೂ ವಿವರಿಸುವುದು ಆಗಿದೆ. ಇಲ್ಲಿ ಉದ್ದೇಶ–ಪ್ರತಿಮಾರ್ಗದಲ್ಲೂ ಸಾಧಕನು ಅನುಸರಿಸಬೇಕಾದ ಹಲವು ಕರ್ಮ ಧರ್ಮಗಳು ಇರುವುವೆಂದೂ, ಪಲಾಯನವಾದದಿಂದ ಪ್ರಯೋಜನವಿಲ್ಲವೆಂದೂ, ಎಲ್ಲ ಮಾರ್ಗಗಳಲ್ಲೂ ಕ್ಷತ್ರಿಯನಿಗೆ–ಅರ್ಜುನನಿಗೆ–ಸುಲಭವೂ, ಸುಕರವೂ ಆದ ಮಾರ್ಗ ನಿಯತ ಕರ್ಮಮಾರ್ಗವೆಂದೂ, ನಡುಕ, ದೌರ್ಬಲ್ಯಗಳನ್ನು ಬಿಟ್ಟು ಯುದ್ಧ ಮಾಡಿ ಗೆದ್ದು ಲೌಕಿಕ ಸುಖಗಳನ್ನು ಅನುಭವಿಸುವುದೋ ಸತ್ತು ಸ್ವರ್ಗ ವೈಭವವನ್ನು ಹೊಂದುವುದೋ ಮಾಡಬೇಕೆಂದು ಭಗವಂತ ಕೇವಲ ತತ್ಕಾಲಸಂಶಯಾತ್ಮನಾದ ಅರ್ಜುನನಿಗೆ ಬೋಧಿಸುತ್ತ ನಿತ್ಯಸಂಶಯಾತ್ಮಕವಾದ ನರಲೋಕವನ್ನೆಲ್ಲ ಎಚ್ಚರಿಸಿ ಶಾಶ್ವತಾನಂದ ಪ್ರದಾಯಿನಿಯಾದ ಗೀತಾಶಾಸ್ತ್ರವನ್ನು ನೀಡಿದನೆನ್ನಬೇಕು.

ಹೀಗೆ ಪರಮಾತ್ಮ ಗೀತೆಯನ್ನು ನೀಡಿದ ರೀತಿಯನ್ನು ಗಮನಿಸಿದಲ್ಲಿ 'ಮಾನವನು ಮಾಧವನಾಗಲು ಇರುವ ವಿಭಿನ್ನಮಾರ್ಗ ಧರ್ಮಸಂಕಲನವೆಂದೆನ್ನಿಸುತ್ತದೆಗೀತೆ'. ಎಂತಲೇ ಇರಬೇಕು ಭಗವಂತನೂ ಸಹ ಸಂಶಯಗಳನ್ನು ತೊರೆದು ಪರಮಾರ್ಥವನ್ನು ಗ್ರಹಿಸಿ ಎನ್ನುತ್ತಾನೆ. "ಉತ್ತಿಷ್ಠ ಜಾಗ್ರತ, ಪ್ರಾಪ್ಯವರಾನ್ನಿಬೋಧತ."

ಅರಣ್ಯಕೋಪನಿಷತ್ತುಗಳು ಬ್ರಾಹ್ಮಣಗಳ ಕೊನೆಯ ಭಾಗಗಳೇ ಆದರೂ ಅವುಗಳ ವಿಷಯಗಳೂ ಭಾಷೆಯೂ ಸ್ವರೂಪವೂ ಆಕಾರವೂ ಭಿನ್ನವಾಗಿರುವುದರಿಂದ ಪ್ರತ್ಯೇಕ ಸಾಹಿತ್ಯದಂತೆಯೇ ಇವೆ. ಇವನ್ನು ಅರಣ್ಯದಲ್ಲಿ ಅಭ್ಯಾಸ ಮಾಡಬೇಕಾಗಿರುವುದರಿಂದ ಇವಕ್ಕೆ ಈ ಹೆಸರು ಬಂದಿದೆ. ಅರಣ್ಯದಲ್ಲಿದ್ದ ವಾನಪ್ರಸ್ಥರು ಯಜ್ಞಸ್ಥಾನದಲ್ಲಿ ಅನುಸರಿಸಬೇಕಾದ ಗೂಢಾರ್ಥ ಚಿಂತನೆಗಳನ್ನು ಇವು ವಿವೇಚಿಸುತ್ತವೆ. ಪ್ರತಿಯೊಂದು ಬ್ರಾಹ್ಮಣಕ್ಕೂ ಪ್ರತ್ಯೇಕವಾದ ಅರಣ್ಯಕಗಳಿವೆ. ಇವುಗಳು ಮುಂದಿನ ಉಪನಿಷತ್ತುಗಳ ಜಿಜ್ಞಾಸಾಸ್ಥಿತಿಗೆ ಅನುಗುಣವಾಗಿರುತ್ತವೆ. ಅಲ್ಲದೆ ಬ್ರಾಹ್ಮಣ ಆರಣ್ಯಕ ಉಪನಿಷತ್ತುಗಳು ಸಾಹಿತ್ಯದಲ್ಲಿಯೇ ಅಲ್ಲದೆ ಪ್ರತಿಯೊಬ್ಬನ ಮಾನಸಿಕ ಬೆಳವಣಿಗೆಯ ಮೂರು ಪ್ರಕಾರವನ್ನು ಸೂಚಿಸತಕ್ಕವಾಗಿವೆ. ಬ್ರಾಹ್ಮಣದಲ್ಲಿ ಬರುವ ಯಜ್ಞವಿಧಿಗಳು ಗೃಹಸ್ಥನ ಕರ್ತವ್ಯಗಳು. ಆರಣ್ಯಕದಲ್ಲಿ ಬರುವ ಸಾಂಕೇತಿಕ ಯಜ್ಞಗಳು ವಾನಪ್ರಸ್ಥನು ಅನುಸಬೇಕಾದ ವಿಧಿನಿಯಮಗಳು. ಉಪನಿಷತ್ತಿನ ದಾರ್ಶನಿಕ ಮನೋಭಾವನೆ ಸನ್ಯಾಸಿಗೆ ವಿಹಿತವಾದ ಚಿಂತನೆಗಳು.

ಆರಣ್ಯಕದ ಕೊನೆಯ ಭಾಗಗಳು ಉಪನಿಷತ್ತುಗಳು. ಇವುಗಳಿಗೆ ವೇದಾಂತಗಳೆಂದೂ ಹೆಸರುಂಟು. ವೇದ ಧರ್ಮದ ಅತ್ಯುನ್ನತ ಆದರ್ಶಗಳನ್ನು ಪ್ರತಿಪಾದಿಸಿ ಮೋಕ್ಷ ಶಾಸ್ತ್ರವೆನ್ನಿಸಿಕೊಂಡಿವೆ. ಅಲ್ಪವೂ, ಅಸ್ಥಿರವೂ, ಅದೃಢವೂ ಆಗಿರುವ ಯಜ್ಞಕರ್ಮಗಳನ್ನು ಬಿಟ್ಟು ಶುದ್ಧವಾದ ಬ್ರಹ್ಮಜ್ಞಾನವನ್ನು ಪ್ರತಿಪಾದಿಸುವ ಈ ಭಾಗಗಳು ವೇದಗಳ ಸಾರಸರ್ವಸ್ವವಾಗಿ ಸರ್ವಶಾಸ್ತ್ರಗಳಿಗೂ ಮೂರ್ಧನ್ಯಪ್ರಾಯವಾಗಿವೆ. ಇವುಗಳ ವಿಚಾರಧಾರೆ ಇತರಭಾಗಗಳಿಗಿಂತ ಭಿನ್ನವಾದ ಆತ್ಮಜ್ಞಾನ ಮತ್ತು ವಿಶ್ವಾತ್ಮ ಜ್ಞಾನಪರವಾಗಿ ಭಾರತದ ಸಂಸ್ಕೃತಿಯ ಅತ್ಯುನ್ನತ್ತದ ಮಟ್ಟವನ್ನು ಪ್ರತಿಬಿಂಬಿಸುತ್ತವೆ. ಸೃಷ್ಟಿಯ ರಹಸ್ಯವನ್ನು ಭೇದಿಸುತ್ತವೆ. 'ತಮೇವ ಧೀರೋ ವಿಜ್ಞಾಯ ಪ್ರಜ್ಞಾಂ ಕುರ್ವೀತ' ಎಂಬ ವಾಕ್ಯದಂತೆ ಸರ್ವಾಂತರ್ಯಾಮಿಯಾದ ಆ ಪರಮಾತ್ಮನನ್ನು ಉಪಾಸನೆ ಮಾಡಬೇಕೆಂದು ವಿಧಿಸುತ್ತವೆ. ಈ ಜ್ಞಾನ ರಾಶಿಯನ್ನು ಪಡೆಯಲು ಸದ್ಗುರುವನ್ನಾಶ್ರಯಿಸಬೇಕೆಂದೂ, ಗುರುವೂ ಪ್ರಶಾಂತ ಚಿತ್ತನೂ, ಶಮಾನ್ವಿತನೂ ಸಮ್ಯಗುಪನ್ನನೂ ಶ್ರದ್ಧಾಳುವೂ ಆದ ಶಿಷ್ಯನಿಗೆ ಮಾತ್ರ ತಿಳಿಸಬೇಕೆಂದೂ ವಿಧಿಸುತ್ತವೆ. ಗುರುವಿನ ಸಮೀಪದಲ್ಲಿಯೇ ಕುಳಿತು ರಹಸ್ಯವಾಗಿ ಸ್ವೀಕರಿಸಬೇಕಾದ ವಿದ್ಯೆಯಾದುದರಿಂದ ಇವಕ್ಕೆ ಈ ಹೆಸರು ಬಂದಿದೆ. ಆದುದರಿಂದಲೇ ಇವು 'ಇತಿ ರಹಸ್ಯಂ' 'ಗುಹ್ಯ ಆದೇಶಃ' 'ಪರಮಂ ಗುಹ್ಯಂ' ಎಂಬುದಾಗಿ ಉಲ್ಲೇಖವಾಗಿವೆ. ಗುಹ್ಯವಿದ್ಯೆಯು ಸುಲಭವಾಗಿ ಅಪಾರ್ಥಕ್ಕೆ ಗುರಿಯಾಗುವ ಸಂಭವವಿರುವುದರಿಂದ ಅದನ್ನು ತಪ್ಪಿಸುವುದೇ ಈ ರಹಸ್ಯದ ಗುರಿಯಿರಬೇಕು.

ಆದಿಯಲ್ಲಿ ಪ್ರತಿ ವೇದಶಾಖೆಗೂ ಪ್ರತ್ಯೇಕವಾದ ಅನೇಕ ಉಪನಿಷತ್ತುಗಳಿದ್ದವು. ಈಗ ಅವುಗಳ ನಿಷ್ಕೃಷ್ಟವಾದ ಸಂಖ್ಯೆಗಳನ್ನಾಗಲೀ ವೇದದ ಯಾವಭಾಗಕ್ಕೆ ಅವು ಸೇರಿದ್ದವೆಂಬುದಾಗಲಿ ತಿಳಿಸಲಾಗುವುದಿಲ್ಲ. ಆದರೆ ಈಗ ಉಪಲಬ್ಧವಾದುವುಗಳಲ್ಲಿ ಈಶಾವಾಸ್ಯವೊಂದನ್ನುಳಿದು ಮಿಕ್ಕೆಲ್ಲವೂ ಆಯಾಶಾಖೆಗೆ ಸಂಬಂಧಪಟ್ಟ ಬ್ರಾಹ್ಮಣ ಅಥವಾ ಆರಣ್ಯಕಗಳ ಭಾಗಗಳು ಎಂಬುದಾಗಿ ಖಚಿತವಾಗಿ ಹೇಳಬಹುದು. ಈಶಾವಾಸ್ಯವು ಶುಕ್ಲ ಯಜುರ್ವೇದದ ಕೊನೆಯಭಾಗ.

ಅನೇಕ ಉಪನಿಷತ್ತುಗಳಿವೆ. ಇವೆಲ್ಲ ಏಕಕಾಲಿಕವಲ್ಲ. ಅನೇಕವು ಈಚಿನವು. ಉಪನಿಷತ್ತುಗಳ ಆಕಾರ ಅಥವಾ ಸ್ವರೂಪ ವಿಷಯ ಮತ್ತು ಭಾಷೆ ಹೆಚ್ಚು ಕಡಿಮೆ ಒಂದೇ ಮಾದರಿಗೆ ಸೇರಿದುದರಿಂದ ಅವುಗಳೆಲ್ಲನೇಕವು ಇತ್ತೀಚಿನವರೆಗೆ ರಚಿತವಾಗುತ್ತಿತ್ತೆಂದು ಊಹಿಸಬಹುದು. ಅಕ್ಬರ್ ಕಾಲದಲ್ಲಿ 'ಅಲ್ಲೋಪನಿಷತ್' ರಚಿತವಾದುದು ಇದಕ್ಕೆ ಸಾಕ್ಷಿ.

**ಡಾ॥ ಎನ್. ಅನಂತರಂಗಾಚಾರ್**

ಆದರೂ ಋಗ್ವೇದಕ್ಕೆ ಸೇರಿದ ಐತರೇಯ, ಕೌಷೀತಕಿ, ಸಾಮವೇದದ ಛಾಂದೋಗ್ಯ, ಕೇನ, ಕೃಷ್ಣಯಜುರ್ವೇದದ ಕಠ, ಶ್ವೇತಾಶ್ವತರ, ಮೈತ್ರಾಯಣೀಯ, ತೈತ್ತಿರೀಯ ಮತ್ತು ಮಹಾನಾರಾಯಣೀಯ, ಶುಕ್ಲಯಜುರ್ವೇದದ ಬೃಹದಾರಣ್ಯಕ, ಈಶಾವಾಸ್ಯ, ಅಥರ್ವವೇದದ ಮುಂಡಕ, ಪ್ರಶ್ನ, ಮತ್ತು ಮಾಂಡೂಕ್ಯ– ಇವು ಬಹು ಪ್ರಾಚೀನವಾದುವೆಂದು ಅಂಗೀಕೃತವಾಗಿವೆ. ಇವುಗಳಲ್ಲಿಯೂ;

ಈಶ ಕೇನ ಕಠ ಪ್ರಶ್ನ
ಮುಂಡ ಮಾಂಡೂಕ್ಯ ತಿತ್ತಿರಿಃ
ಐತರೇಯಂ ಚ ಛಾಂದೋಗ್ಯಂ
ಬೃಹದಾರಣ್ಯಕಂ ತಥಾ ॥

ಎಂಬ ಹತ್ತು ಉಪನಿಷತ್ತುಗಳು ಪ್ರಸಿದ್ಧವಾಗಿವೆ. ಸುಪ್ರಸಿದ್ಧ ಭಾಷ್ಯಕಾರರಾದ ಶಂಕರ ಭಗವತ್ಪಾದರು ಈ ದಶೋಪನಿಷತ್ತುಗಳಿಗೂ ನೃಸಿಂಹ ಪೂರ್ವತಾಪನೀ ಎಂಬ ಮತ್ತೊಂದು ಉಪನಿಷತ್ತಿಗೂ ಭಾಷ್ಯಗಳನ್ನು ರಚಿಸಿದ್ದಾರೆ. ಭಗವದ್ರಾಮಾನುಜಾಚಾರ್ಯರು ಯಾವ ಉಪನಿಷತ್ತುಗಳಿಗೂ ಭಾಷ್ಯಗಳನ್ನು ರಚಿಸದಿದ್ದರೂ, ಈ ಹನ್ನೊಂದೇ ಅಲ್ಲದೆ ಇನ್ನೂ ಇತರ ಉಪನಿಷತ್ತುಗಳಿಂದ ಅನುವಾದ ಮಾಡಿದ್ದಾರೆ. ಇವುಗಳೆಲ್ಲ ವೇದಗಳಂತೆಯೇ ಋಷಿಗಳಿಂದ ದೃಷ್ಟವಾಗಿ ಬೌದ್ಧ ಕಾಲಕ್ಕಿಂತ ಹಿಂದಿನಿಂದ ಸುಪ್ರಸಿದ್ಧವಾಗಿದ್ದವೆಂಬುದರಲ್ಲಿ ಸಂದೇಹವಿಲ್ಲ.

ಋಗ್ವೇದದಲ್ಲಿ ಬೀಜರೂಪವಾಗಿದ್ದ ಅಧ್ಯಾತ್ಮವಿದ್ಯೆಯು ಬ್ರಾಹ್ಮಣ ಆರಣ್ಯಕಗಳಲ್ಲಿ ಪರಿಪುಷ್ಟವಾಗಿ, ಉಪನಿಷತ್ತುಗಳಲ್ಲಿ ಪರಿಪೂರ್ಣತೆಯನ್ನು ಪಡೆದಿದೆ. ಉಪನಿಷತ್ತುಗಳಲ್ಲಿ ಚರ್ಚಿತವಾಗಿರುವ ವಿಷಯಗಳು ಅತಿ ಗಹನವಾದುವು — ನಾನಾರು? ಸತ್ತಮೇಲೇನಾಗುತ್ತದೆ? ಪ್ರಪಂಚ ಸ್ವರೂಪವೇನು? ಅದನ್ನು ಸೃಷ್ಟಿಸಿದವನಾರು? ಆತನ ಶಕ್ತಿ ಎಂತಹದು? ಪರಬ್ರಹ್ಮ ಸ್ವರೂಪವೇನು? ಅದಕ್ಕೂ ಪ್ರಪಂಚಕ್ಕೂ ಇರುವ ಸಂಬಂಧವೇನು? –ಇವೇ ಮೊದಲಾದ ಅನೇಕ ವಿಷಯಗಳು ಚರ್ಚಿತ

ವಾಗಿ ಯೋಗ್ಯ ಉತ್ತರಗಳು ಕೊಡಲ್ಪಟ್ಟಿವೆ. ಇಲ್ಲಿ ಯಾವ ಕ್ರಮಬದ್ಧವಾದ ನಿಯಮ ನಿರ್ಬಂಧಗಳಿಲ್ಲ. ಇಲ್ಲಿ ಕಂಡು ಬರುವ ಉಕ್ತಿಸ್ವಾತಂತ್ರ್ಯವೂ ದೃಷ್ಟಿವೈಶಾಲ್ಯವೂ ಆಶ್ಚರ್ಯಕರವಾಗಿವೆ. ಆದುದರಿಂದಲೇ ವೇದಾಂತಿಗಳೇ ಅಲ್ಲದೆ ಸಾಂಖ್ಯ, ಯೋಗ, ವೈಶೇಷಿಕ, ನೈಯಾಯಿಕ ಪಂಥದವರೂ ತಮ್ಮ ದರ್ಶನಗಳನ್ನು ಉಪನಿಷನ್ಮೂಲಗಳೆಂದು ಒಪ್ಪಿಕೊಂಡಿದ್ದಾರೆ.

## ವೇದಾಂಗಗಳು

ವೇದರಾಶಿಯ ಸುಖಾವಬೋಧೆಗಾಗಿಯೂ ಅವುಗಳ ಮೂಲರೂಪವನ್ನು ಸ್ವಲ್ಪವೂ ಕಲುಷಿತವನ್ನಾಗಿಸದೆ ಶುದ್ಧವಾಗಿ ಮುಂದುವರಿಸುವುದಕ್ಕಾಗಿಯೂ ಸ್ಮೃತಿಗಳೆಂಬ ಗ್ರಂಥರಾಶಿಗಳು ರಚಿತವಾದುವು. ಇವು ಸೂತ್ರರೂಪದಲ್ಲಿವೆ. ಪೌರುಷೇಯಗಳು ಶ್ರುತ್ಯರ್ಥಕ್ಕನುಸಾರವಾಗಿ ನಿರ್ಮಿತವಾದುವು. ಇವುಗಳಿಗೆ ವೇದಾಂಗಗಳೆಂದು ಹೆಸರು. ಬಹು ಸಂಗ್ರಹವಾಗಿವೆ. ವ್ಯಾಖ್ಯಾನಗಳಿಲ್ಲದೆ ಅರ್ಥವಾಗುವುದಿಲ್ಲ. ಸಾಹಿತ್ಯದ ದೃಷ್ಟಿಯಿಂದ ಅಷ್ಟು ರಸವತ್ತಾಗಿಯೂ ಆಕರ್ಷಕವಾಗಿಯೂ ಇಲ್ಲ. ಈ ವೇದಾಂಗಗಳು ಆರು. ವೇದಾರ್ಥ ಜ್ಞಾನಕ್ಕೆ ಅವಶ್ಯಕವಾದ ಸಲಕರಣೆಗಳು ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ, ಕಲ್ಪ ಎಂಬ ಆರೂ ವೇದಾಂಗಗಳು.

ಶಿಕ್ಷೆಯೆಂಬುದು ವೇದಭಾಗಗಳನ್ನು ಸರಿಯಾಗಿ ಉಚ್ಚಾರ ಮಾಡುವುದನ್ನು ತಿಳಿಸುವ ಗ್ರಂಥಗಳು 'ಶಿಕ್ಷ್ಯಂತೇ ವೇದನಾಯೋಪದಿಶ್ಯಂತೆ ಸ್ವರವರ್ಣಾದಯೋ ಯತ್ರಾಸೌ ಶಿಕ್ಷಾ' ಎಂಬುದು ಸಾಯಣರ ವಿವರಣೆ. ಈಚೆಗೆ ಶಿಕ್ಷೆಗಳೆಂದು ಪ್ರಕಟವಾಗಿರುವ ಗದ್ಯಭಾಗಗಳು ಇತ್ತೀಚಿನವೆಂದು ಕಾಣುತ್ತದೆ. ಮೊದಲು ಅವು ಬ್ರಾಹ್ಮಣಗಳ ಭಾಗವೇ ಆಗಿರಬೇಕು. ಆಮೇಲೆ ಅವು ಪ್ರಾತಿಶಾಖ್ಯಗಳಲ್ಲಿ ಐಕ್ಯವಾಗಿ ಬಿಟ್ಟವು. ಈ ಪ್ರಾತಿಶಾಖ್ಯಗಳು ಸರಳವಾಗಿಯೂ ಯಾವ ಪಾಂಡಿತ್ಯದಿಂದ ಕೂಡಿರದವೂ ಆಗಿವೆ. ಸುಲಭ ಗ್ರಾಹ್ಯವಾಗಿವೆ. ಅವುಗಳ ಉದ್ದೇಶ ಸ್ತೋತ್ರವಲ್ಲ. ಜಿಜ್ಞಾಸೆಯೂ ಅಲ್ಲ. ಉಪದೇಶ ರೂಪದಲ್ಲಿ ವಿವರಿಸುವುದು; ಪ್ರಾತಿಶಾಖ್ಯವೆಂದರೆ ಪ್ರತಿಶಾಖೆಗೆ ಸೇರಿರುವುದು ಎಂದರ್ಥ. ಬೆಳೆಯುತ್ತಿರುವ ಜನರಾಡುವ ಭಾಷೆಯು ವೇದಭಾಷೆಗಿಂತ ಭಿನ್ನವಾಗಿ ಭಿನ್ನ ಭಿನ್ನ ಶಾಖೆಗಳ ಉಚ್ಚಾರ ಕ್ರಮವು ವ್ಯತ್ಯಾಸವಾದ ಪ್ರಯುಕ್ತ ವೇದದ ಮೂಲಸ್ವರೂಪವನ್ನು ಶುದ್ಧವಾಗಿ ಇಡುವುದಕ್ಕಾಗಿ ಈ ಪ್ರಾತಿಶಾಖ್ಯಗಳು ಹುಟ್ಟಿರಬೇಕು. ಇಲ್ಲಿ ಶಾಖೆಗಳೆಂದರೆ ಭಿನ್ನ ಪಂಥವೆಂದರ್ಥವಲ್ಲ. ಒಂದೇ ವೇದದ ಭಿನ್ನ ಪಾಠಗಳೆಂದು ಗ್ರಹಿಸಬಹುದು. ಇಂತಹುದೇ ಚರಣವೆಂಬ ಶಬ್ದವೂ ಕೂಡ. 'ಮಾಲತೀ ಮಾಧವ' ವ್ಯಾಖ್ಯಾನಕಾರನಾದ ಜಗದ್ಧರನ ಪ್ರಕಾರ ಚರಣಶಬ್ದವೆಂಬುದು 'ಚರಣಶಬ್ದಃ ಶಾಖಾ ವಿಶೇಷಾಧ್ಯಯನಪರೈಕತಾಪನ್ನ ಜನಸಂಘವಾಚೀ' ಅಂದರೆ ಒಂದು ವೇದದ ಒಂದು ರೀತಿಯ ಪಾಠವನ್ನು ಅಂಗೀಕರಿಸುವ ಜನರ ಗುಂಪು. ಭಿನ್ನ ಚರಣಗಳಿಗೆ ಸೇರಿದವರಿಗೆ ಪರಿಷತ್ ಎಂದು ಹೆಸರು.

ಋಗ್ವೇದದ ಶಾಕಲ ಶಾಖೆಗೆ ಶೌನಕೀಯ ಪ್ರಾತಿಶಾಖ್ಯವಿದೆ. ಕಾತ್ಯಾಯನ ವಿರಚಿತ ಪ್ರಾತಿಶಾಖ್ಯ ಯಜುರ್ವೇದದ್ದು. ಇದು ಶುಕ್ಲಯಜುರ್ವೇದಕ್ಕೆ ಸಂಬಂಧಪಟ್ಟುದು. ತೈತ್ತರೀಯ ಪ್ರಾತಿಶಾಖ್ಯವು ಕೃಷ್ಣಯಜುರ್ವೇದಕ್ಕೆ ಸೇರಿದುದು. ಸಾಮವೇದಕ್ಕೆ ಸಾಮವೇದ ಪ್ರಾತಿಶಾಖ್ಯ, ಪುಷ್ಪ ಸೂತ್ರ ಮತ್ತು ಪಂಚವಿಧಸೂತ್ರ ಎಂಬುವುಗಳೂ ಇವೆ. ಅಥರ್ವವೇದಕ್ಕೆ ಅಥರ್ವವೇದ ಪ್ರಾತಿಶಾಖ್ಯವಿದೆ. ಪ್ರಾತಿಶಾಖ್ಯಗಳ ಸಾಮಾನ್ಯ ಪರಿಚಯಕ್ಕಾಗಿ ಶಾಕಲ ಪ್ರಾತಿಶಾಖ್ಯದ ಪರಿವಿಡಿಯನ್ನು ಪರಿಶೀಲಿಸಬಹುದು. ಇದರಲ್ಲಿ ಮೂರು ಅಧ್ಯಾಯಗಳೂ ೧೮ ಪಟಲಗಳೂ ಇವೆ. ಅವುಗಳ ವಿಷಯ ವಿವರ ಈ ರೀತಿಯಿದೆ ೧ ಪರಿಭಾಷಾ ಪಟಲ–ಸ್ವರ ವ್ಯಂಜನ, ಅವುಗಳ ಭೇದ, ವೈಶಿಷ್ಟ್ಯ ಮೊದಲಾದುವು. ೨. ಸಂಹಿತಾಪಟಲ–ಸ್ವರ ಸಂಧಿಗಳ ವಿಷಯ. ೩. ಸ್ವರಸಂಧಿಗಳು – ೪,೫,೬, ವ್ಯಂಜನ ಸಂಧಿ, ೭ ರಿಂದ ೯ ಸ್ವರಿತಗಳು ೧೧. ಅಂತಸ್ಥಗಳು, ೧೨. ಸಂಯುಕ್ತವರ್ಣಗಳು, ೧೩. ವರ್ಣೋತ್ಪತ್ತಿ ಸ್ಥಾನ, ಮತ್ತು ಪ್ರಯತ್ನಗಳು. ೧೪. ಅಕ್ಷರಶಕ್ತಿ. ೧೫. ವೇದಾಭ್ಯಾಸ ಕಾಲ, ೧೬–೧೮ ಛಂದಸ್ಸು, ಲಕ್ಷಣ ದೇವತೆ ಇತ್ಯಾದಿ. ಉಳಿದ ಪ್ರಾತಿಶಾಖ್ಯಗಳು ಹೆಚ್ಚು ಕಡಿಮೆ ಇದೇ ರೀತಿ ಇರುತ್ತವೆ.

ಅಮರಸಿಂಹನ ಪ್ರಕಾರ ಛಂದಸ್ಸು ೩ನೆಯ ವೇದಾಂಗ. ಛಂದಸ್ಸು ಶಬ್ದವು 'ಛದಿ ಆಹ್ಲಾದನೇ' ಎಂಬ ಧಾತುವಿನಿಂದ ಬಂದಿದೆ. ಆದುದರಿಂದ ಆಹ್ಲಾದನಾ ಸಾಮಗ್ರಿ ಎಂಬ ಅರ್ಥವುಂಟಾಗುತ್ತದೆ. ಯಾಸ್ಕರು 'ಛದಿ'–ಅವರಣೇ ಎಂಬ ಅರ್ಥದಲ್ಲಿ ಮುಚ್ಚುವುದು ಆಚ್ಛಾದಿಸಿರುವುದು ಎಂಬರ್ಥದಲ್ಲಿ ನಿಷ್ಪತ್ತಿ ಮಾಡಿದ್ದಾರೆ. ರೂಢಿಯಲ್ಲಿ ವೇದಸಾಮಾನ್ಯಕ್ಕೆ ಛಂದಸ್ಸೆಂಬ ನಾಮಾಂತರವೂ ಉಂಟು.

ಕಾವ್ಯ ಶಾಸ್ತ್ರಗಳಂತೆಯೇ ವೇದವು ಛಂದೋಮಯವಾಗಿರುವುದಕ್ಕೆ ಕಾರಣವಿಲ್ಲದೆ ಇಲ್ಲ. ಭಾಷೆಯು ಛಂದಸ್ಸಿನಲ್ಲಿ ಅಡಕವಾಗಿ ಸೇರಿಕೊಳ್ಳುತ್ತದೆ. ಭಾವಗಳು ಛಂದಸ್ಸಿನಲ್ಲಿ ಸ್ಪಷ್ಟವಾಗಿ ಪ್ರಕಟವಾಗುವುವು. ಛಂದಸ್ಸು ದೇವತೆಗಳನ್ನು ಸ್ತೋತ್ರ ಮಾಡುವುದಕ್ಕೆ ಗಾನರೂಪವಾಗಿ ಹಾಡುವುದಕ್ಕೆ ಬಹು ಉಪಯುಕ್ತವಾಗಿರುತ್ತವೆ. ಕಂ
ಪಾಠ ಮಾಡುವುದಕ್ಕೆ ಸುಲಭವಾಗಿರುತ್ತ
ಸ್ಖಾಲಿತ್ಯವಿಲ್ಲದಿರಲು ಬಹುಸಹಾಯಕವಾಗುತ್ತ
ಆದುದರಿಂದಲೇ ಶಿಕ್ಷೆಯಲ್ಲಿ ವೇದಕ್ಕೂ ಛಂದಸ್ಸಿಗ
ಅವಿನಾಭಾವ ಸಂಬಂಧವನ್ನು 'ಛಂದಃ ಪಾದೌ
ವೇದಸ್ಯ' ಎಂಬ ವಾಕ್ಯದಿಂದ ಸ್ಪಷ್ಟೀಕರಿಸಿದೆ. ಅಲ್ಲ
ಮೇಲೆ ತಿಳಿಸಿರುವಂತೆ ಶೌನಕೀಯ ಪ್ರಾ
ಶಾಖ್ಯದ ಕೊನೆಯಭಾಗವು ಛಂದಸ್ಸಿನ ವಿಷ
ವಾಗಿಯೇ ಇದೆ.

ಪಿಂಗಲರಿಂದ ರಚಿತವಾದ ಛಂದಸ್ಸೇ ಈ
ಉಪಲಬ್ಧವಾಗಿರುವ ವೈದಿಕ ಛಂದಶ್ಶಾಸ್ತ್ರ. ಇ
ದರಲ್ಲಿ ವೈದಿಕ ಲೌಕಿಕ ಛಂದಸ್ಸುಗಳೆರಡರ ವಿ
ಯವೂ ಉಕ್ತವಾಗಿರುವುದರಿಂದ ಇದನ್ನು ಪರ
ಪ್ರಾಚೀನವೆಂದು ಹೇಳಲಾಗುವುದಿಲ್ಲ. ಬ್ರಾಹ್ಮ
ಆರಣ್ಯಕಗಳಲ್ಲಿಯೇ ಛಂದಶ್ಶಾಸ್ತ್ರದ ಮೂ
ರೂಪವನ್ನು ಕಾಣಬಹುದು. ಅವುಗಳ ಆಧಾರ
ಮೇಲೆಯೇ ಮುಂದಿನ ಛಂದೋಗ್ರಂಥಗಳು ಬೆ
ದಿರಬೇಕು. ವೈದಿಕ ಛಂದಸ್ಸು ಲೌಕಿಕ ಛಂದ
ಸ್ಸಷ್ಟು ಕ್ರಮಬದ್ಧವಾಗಿಲ್ಲ. ಗಣಕ್ರಮಗಳ
ಅಷ್ಟು ನಿರ್ಬಂಧವಿಲ್ಲ. ಅಕ್ಷರ ಸಂಖ್ಯೆಯೇ ಒಂ
ಛಂದಸ್ಸಿಗೂ ಮತ್ತೊಂದು ಛಂದಸ್ಸಿಗೂ ವ್ಯತ್ಯಾ
ಸವನ್ನು ಸೂಚಿಸುವ ಅಂಶ. ಗಾಯತ್ರಿ, ಉಷ್ಣಿಕ್
ಪುರಉಷ್ಣಿಕ್ ಕಕುಭ್, ಅನುಷ್ಟುಪ್, ಬೃಹತಿ
ಸತೋಬೃಹತೀ, ಪಂಕ್ತಿ, ಪ್ರಸಾರ ಪಂಕ್ತಿ
ವಿರಾಜ್, ತ್ರಿಷ್ಟುಪ್, ಜಗತೀ ಮೊದಲಾದು
ಪ್ರಧಾನ ವೈದಿಕ ಛಂದಸ್ಸುಗಳು. ಪಾದಗಳ ರೂ
ವ್ಯತ್ಯಾಸದಿಂದ ಅನೇಕ ಅಂತರ್ಭೇದಗಳೂ ಇವೆ
ಇವೆಲ್ಲವನ್ನೂ ಕಾತ್ಯಾಯನರ 'ಸರ್ವಾನುಕ್ರಮಣಿ
ಯಲ್ಲಿ ವಿವರವಾಗಿ ಹೇಳಿದೆ.

ವೇದಕ್ಕೆ ಸಂಬಂಧಪಟ್ಟ ಪ್ರತ್ಯೇಕವ್ಯಾಕರ
ಈಗ ಉಪಲಬ್ಧವಲ್ಲ. ಪ್ರಾಚೀನ ವೈದಿಕ ವ್ಯಾ
ರಣಗಳ ಕೆಲವುಭಾಗಮಾತ್ರ ಅಲ್ಲಲ್ಲಿ ಸಿಕ್ಕುವು
ಹಿಂದಿನ ವ್ಯಾಕರಣಕಾರರಲ್ಲಿ ಶಾಕಲಾಯನ
ಗಾರ್ಗ್ಯ, ಶಾಕಲ್ಯ, ಯಾಸ್ಕ–ಇವರು ಮುಖ
ರಾದವರು. ಈಗಿರುವ ವ್ಯಾಕರಣಗಳಲ್ಲಿ ಪಾ
ನಿಯ 'ಅಷ್ಟಾಧ್ಯಾಯಿ'ಯೇ ಪ್ರಾಚೀನ ವ
ಪ್ರಮುಖವೂ ಆದುದು. ಇದು ಪರಮ ಪ್ರಾಚೀ
ನವಂತೂ ಅಲ್ಲ. ಇದರಲ್ಲಿ ಬರುವ ವೈದಿಕ ಪ್ರ
ರಣವು ಅತಿಸಂಗ್ರಹವೂ ಪ್ರಾಸಂಗಿಕವೂ ಆದುದು
ಪಾಣಿನಿಗಿಂತ ಪ್ರಾಚೀನವಾದುವು ಉಣಾ
ಸೂತ್ರಗಳು ಮತ್ತು ಫಿಟ್ ಸೂತ್ರಗಳು. ಉಣಾ
ಸೂತ್ರಗಳು ಸುಬಂತಗಳ ಸ್ವರೂಪವ ನ
ಉಣಾದಿ ಪ್ರತ್ಯಯಗಳನ್ನೂ ತಿಳಿಸುವುವು. ಉಣ
ಪ್ರತ್ಯಯದಿಂದ ಪ್ರಾರಂಭವಾಗುವುದರಿಂದ ಅದಕ
ಆ ಹೆಸರು ಬಂದಿದೆ. ಫಿಟ್ ಸೂತ್ರಗಳು ಸ್ವ
ಪ್ರಕ್ರಿಯೆಯನ್ನು ತಿಳಿಸುವುವು.

ವೇದಾಂಗಗಳಲ್ಲಿ ನಿರುಕ್ತವು ನಾಲ್ಕನೆಯದು. ಶಬ್ದ ವ್ಯುತ್ಪತ್ತಿಯನ್ನು ತಿಳಿಸುವ ಶಾಸ್ತ್ರ. ಯಾಸ್ಕರ ನಿರುಕ್ತವೇ ಈಗ ಪ್ರಚಾರದಲ್ಲಿರುವ ಈ ಶಾಖೆಯ ಗ್ರಂಥ. ಆದರೆ ಇವರಿಗೆ ಹಿಂದೆ ಅನೇಕ ನಿರುಕ್ತಕಾರರಿದ್ದರೆಂಬುದನ್ನು ಯಾಸ್ಕರ ಉಲ್ಲೇಖಗಳಿಂದ ತಿಳಿಯಬಹುದು. ನಿರುಕ್ತವು ಹದಿನಾಲ್ಕು ಪ್ರಭೇದಗಳಲ್ಲಿತ್ತೆಂದು ದುರ್ಗಾಭಾಷ್ಯದಲ್ಲಿ ಸ್ಪಷ್ಟವಾಗಿ ಹೇಳಿದೆ. ಯಾಸ್ಕರೇ ತಮ್ಮ ನಿರುಕ್ತದಲ್ಲಿ ಆಗ್ರಾಯಣ, ಔದುಂಬರಾಯಣ, ಔಪಮನ್ಯವ, ಔರ್ಣನಾಭ, ಕಾಥಕ್ಯ, ಕೌತ್ಸ, ಗಾರ್ಗ್ಯ, ಗಾಲವ, ಚರ್ಮಶಿರಸ್, ವಾರ್ಷ್ಯಾಯಣಿ, ಶತವಲಾಕ್ಷ, ಮೌದ್ಗಲ್ಯ, ಶಾಕಟಾಯನ, ಶಾಕಪೂಣಿ, ಸ್ಥೌಲಷ್ಠೀವಿ, ಮುಂತಾದ ಪ್ರಾಚೀನ ನೈರುಕ್ತರನ್ನೂ ಉಲ್ಲೇಖಿಸಿದ್ದಾರೆ. ಇದರಿಂದ ಯಾಸ್ಕರು ತಮ್ಮ ಹಿಂದಿನವರ ಪ್ರಯೋಜನವನ್ನು ಪಡೆದು ಈ ಗ್ರಂಥ ನಿರ್ಮಾಣ ಮಾಡಿದ್ದಾರೆಂಬುದು ಸ್ಪಷ್ಟವಾಗುತ್ತದೆ.

ಇದರಲ್ಲಿ ನಿಘಂಟು, ನಿರುಕ್ತ ಎಂಬ ಎರಡು ಭಾಗಗಳಿವೆ. ನಿಘಂಟುವಿನಲ್ಲಿ ಶಬ್ದಾನುಕ್ರಮಣಿ ಮಾತ್ರವಿದೆ. ನಿರುಕ್ತದಲ್ಲಿ ಶಬ್ದಗಳ ವಿಶದವಾದ ವಿವರಣೆಯಿದೆ. ನಿಘಂಟು ಅಥವಾ ಸಮಾಮ್ನಾಯವು ಮೂರು ಭಾಗವಾಗಿದೆ. ನೈಘಂಟುಕ ಕಾಂಡ ಮೊದಲನೆಯದು. ಇದರಲ್ಲಿ ಮೂರು ಅಧ್ಯಾಯಗಳಿವೆ. ಒಂದನೆಯದರಲ್ಲಿ ಇಹ ಮತ್ತು ಪರಲೋಕಗಳಲ್ಲಿರುವ ಕಾಲ ಆಕಾಶ ಮೊದಲಾದುವುಗಳಿಗೆ ಸಂಬಂಧಪಟ್ಟ ಶಬ್ದಗಳಿವೆ. ಎರಡನೆಯದರಲ್ಲಿ ಮನುಷ್ಯರು ಮತ್ತು ಅವರ ಅಂಗಾಂಗಗಳಿಗೆ ಸಂಬಂಧಿಸಿದ ಶಬ್ದಗಳಿವೆ. ಮೂರನೆಯದರಲ್ಲಿ ಗುಣವಿಷಯಕವಾದ ಶಬ್ದಗಳಿವೆ. ಎರಡನೆಯದು ನೈಗಮಕಾಂಡ ಇದರಲ್ಲಿ ಲುಪ್ತವಾದ ವೈದಿಕ ಪದಗಳ ಪಟ್ಟಿಇದೆ. ಆದುದರಿಂದಲೇ ಇದಕ್ಕೆ ಏಕಪದಿಕಕಾಂಡವೆಂಬ ಮತ್ತೊಂದು ಹೆಸರೂ ಉಂಟು. ಕೊನೆಯದೇ ಮೂರು ಅಧ್ಯಾಯಗಳಿಂದ ಕೂಡಿದ ದೈವತಕಾಂಡ–ದೇವರುಗಳ ಹೆಸರುಗಳನ್ನೊಳಗೊಂಡಿದೆ.

ಈ ಶಬ್ದಕೋಶದ ಅಥವಾ ನಿಘಂಟುವಿನ ವ್ಯಾಖ್ಯಾನವೇ ನಿರುಕ್ತ. ಇದು ಅನೇಕ ದೃಷ್ಟಿಯಿಂದ ಮುಖ್ಯವಾದುದು. ಇದು ಪ್ರಾಚೀನ ವೈದಿಕ ಶೈಲಿಯ ಪ್ರತೀಕ. ಇದು ವೇದಗಳ ಸುಪ್ರಾಚೀನವಾದ ವ್ಯಾಖ್ಯಾನ ರೀತಿಯನ್ನು ಕೌಶಲ್ಯದಿಂದಲೂ ಧೈರ್ಯದಿಂದಲೂ ತಿಳಿಯಪಡಿಸುತ್ತದೆ. ಅಲ್ಲದೆ ನಿಘಂಟುವಿನ ಶಬ್ದಗಳ ವ್ಯುತ್ಪತ್ತಿಯನ್ನು ತಿಳಿಸುವ ಸಂದರ್ಭದಲ್ಲಿ ಆ ಪದ ಬರುವ ಮಂತ್ರವನ್ನು ಉದಾಹರಿಸಿ ಪ್ರಸಂಗವಶಾತ್ ಆ ಮಂತ್ರಗಳ ಅರ್ಥವನ್ನೂ ವಿವರಿಸಿದ್ದಾರೆ. ಆದುದರಿಂದಲೇ ನಿರುಕ್ತವೇ ಮೊಟ್ಟ ಮೊದಲ ವೇದಭಾಷ್ಯವಾಗಿದೆ. ಇಲ್ಲಿ ಬರುವ ವ್ಯಾಕರಣಶಾಸ್ತ್ರದ ಸಮೀಕ್ಷೆ ಪ್ರಾತಿಶಾಖ್ಯಕ್ಕೂ ಪಾಣಿನಿಯ ಕಾಲಕ್ಕೂ ನಡುವಣ ಕೊಂಡಿಯಂತಿದೆ. ವೇದ ವಾಙ್ಮಯದ ಸ್ವರೂಪದ ವಿಮರ್ಶೆಯೂ ಇಲ್ಲಿದೆ. ಇವು ಬ್ರಾಹ್ಮಣ ಮತ್ತು ಆರಣ್ಯಕಗಳಲ್ಲಿ ಉಕ್ತವಾಗಿರುವ ವಿವರಣೆಗಳ ಆಧಾರದ ಮೇಲೆ ರಚಿತವಾಗಿದೆ.

ನಿರುಕ್ತದಲ್ಲಿ ೧೨ ಅಧ್ಯಾಯಗಳಿವೆ. ೨ ಪರಿಶಿಷ್ಟಗಳಿವೆ. ಒಂದೊಂದು ಅಧ್ಯಾಯವೂ ಅನೇಕ ಖಂಡಗಳಾಗಿ ವಿಭಾಗವಾಗಿದೆ. ಮೊದಲ ಮೂರು ಅಧ್ಯಾಯಗಳು ನೈಘಂಟುಕ ಕಾಂಡಗಳಿಗೆ ಸಂಬಂಧಪಟ್ಟವು. ನಾಲ್ಕರಿಂದ ಆರು ಅಧ್ಯಾಯಗಳು ನೈಗಮ ವಿಷಯಕವಾದುವು. ಉಳಿದ ಆರು ದೇವತಾ ವಿಷಯವಾದವು. ಇವುಗಳಲ್ಲಿ ವೇದಾಭ್ಯಾಸಕ್ಕೆ ಪೀಠಿಕಾರೂಪವಾಗಿರುವ ಒಂದನೆಯ ಅಧ್ಯಾಯ ಒನೆಯ ಅಧ್ಯಾಯದ ಕೆಲವು ಭಾಗಗಳು ಮತ್ತು ಏಳನೆಯ ಅಧ್ಯಾಯವು ಬಹು ಆಕರ್ಷಕವಾಗಿವೆ.

ಯಾಸ್ಕರು ಮೊದಲು ನಾಮ, ಆಖ್ಯಾತ, ಉಪಸರ್ಗ ಮತ್ತು ನಿಪಾತಗಳ ಲಕ್ಷಣಗಳನ್ನೂ ಅವುಗಳ ಪರಸ್ಪರ ಸಂಬಂಧ ವ್ಯತ್ಯಾಸಗಳನ್ನೂ ತಿಳಿ

---

ಮುಕ್ತಿಕ ಉಪನಿಷತ್ತಿನಲ್ಲಿ ೧೦೮ ಉಪನಿಷತ್ತುಗಳ ಪಟ್ಟಿಯಿದೆ, ಅವನ್ನು ಆಯಾ ಶಾಖೆಗಳಿಗೆ ಸಂಬಂಧಪಟ್ಟಂತೆ ಈ ರೀತಿ ಸೂಚಿಸಬಹುದು.

ಋಗ್ವೇದಕ್ಕೆ ಸಂಬಂಧಪಟ್ಟವು–

ಐತರೇಯ, ಕೌಷೀತಕಿ, ನಾದಬಿಂದು, ಆತ್ಮ ಪ್ರಬೋಧ, ನಿರ್ವಾಣ, ಮುದ್ಗಲ ಅಕ್ಷಮಾಲಿಕ, ತ್ರಿಪುರ, ಸೌಭಾಗ್ಯ, ಮತ್ತು ಬಹ್ವೃಚ.

ಶುಕ್ಲಯಜುರ್ವೇದಕ್ಕೆ ಸೇರಿದುವು–

ಈಶಾವಾಸ್ಯ, ಬೃಹದಾರಣ್ಯಕ, ಜಾಬಾಲ, ಹಂಸ, ಪರಮಹಂಸ, ಸುಬಾಲ, ಮಂತ್ರಿಕ, ನಿರಾಲಂಬ, ತ್ರಿಶಿಖಿಬ್ರಾಹ್ಮಣ, ಮಂಡಲಬ್ರಾಹ್ಮಣ. ಅದ್ವಯತಾರಕ, ಪೈಂಗಳಭಿಕ್ಷು, ತುರೀಯಾತೀತ, ಅಧ್ಯಾತ್ಮ, ತಾರಸಾರ, ಯಾಜ್ಞವಲ್ಕ್ಯ, ಸಾತ್ಯಾಯನಿ ಮತ್ತು ಮುಕ್ತಿಕ.

ಕೃಷ್ಣಯಜುರ್ವೇದಕ್ಕೆ ಸಂಬಂಧಿಸಿದವು–

ಕಠವಲ್ಲಿ, ತೈತ್ತರೀಯ, ಬ್ರಹ್ಮ, ಕೈವಲ್ಯ. ಶ್ವೇತಾಶ್ವತರ, ಗರ್ಭ, ನಾರಾಯಣ, ಅಮೃತಬಿಂದು, ಅಮೃತನಾದ, ಕಾಲಾಗ್ನಿರುದ್ರ, ಕ್ಷುರಿಕ, ಸರ್ವಸಾರ, ಶುಕರಹಸ್ಯ, ತೇಜೋಬಿಂದು, ಧ್ಯಾನಬಿಂದು, ಬ್ರಹ್ಮವಿದ್ಯ, ಯೋಗತತ್ತ್ವ, ದಕ್ಷಿಣಾಮೂರ್ತಿ, ಸ್ಕಂದ, ಶಾರೀರಕ, ಯೋಗಶಿಖ, ಏಕಾಕ್ಷರ, ಅಕ್ಷಿ, ಅವಧೂತ, ಕಠಾರುದ್ರ, ಹೃದಯ, ಯೋಗಕುಂಡಲಿನಿ, ಪಂಚಬ್ರಹ್ಮ, ಪ್ರಾಣಾಗ್ನಿಹೋತ್ರ, ವರಾಹ, ಕಲಿಸಂತರಣ ಸರಸ್ವತೀ ರಹಸ್ಯ.

ಸಾಮವೇದಕ್ಕೆ ಸೇರಿದವು–

ಕೇನ, ಛಾಂದೋಗ್ಯ, ಆರುಣಿ, ಮೈತ್ರಾಯಣಿ, ಮೈತ್ರೇಯಿ, ವಜ್ರಸೂಚಕ ಯೋಗಚೂಡಾಮಣಿ, ವಾಸುದೇವ, ಮಹತ್, ಸಂನ್ಯಾಸ, ವಜ್ರ, ಕುಂಡಿಕ, ಸಾವಿತ್ರಿ, ದರ್ಶನ, ಜಾಬಾಲಿ.

ಅಥರ್ವವೇದಕ್ಕೆ ಸಂಬಂಧಪಟ್ಟವು–

ಪ್ರಶ್ನ. ಮುಂಡಕ, ಮಾಂಡೂಕ್ಯ, ರುದ್ರಾಕ್ಷ, ಜಾಬಾಲ, ಅಥರ್ವಶಿರಸ್, ಅಥರ್ವಶಿಖಾ, ಬೃಹಜ್ಜಾಬಾಲಾ, ನೃಸಿಂಹತಾಪನೀ, ನಾರದಪರಿವ್ರಾಜಕ, ಸೀತಾ, ಶರಭ, ಮಹಾನಾರಾಯಣ, ರಾಮರಹಸ್ಯ, ರಾಮತಾಪನೀ, ಶಾಂಡಿಲ್ಯ ಪರಮಹಂಸ, ಪರಿವ್ರಾಜಕ, ಅನ್ನಪೂರ್ಣ, ಸೂರ್ಯ, ಆತ್ಮ ಪಾಶುಪತ, ಪರಬ್ರಹ್ಮ, ತ್ರಿಪುರಾತಾಪಿನೀ, ದೇವೀ, ಭಾವನ, ಭಸ್ಮಜಾಬಾಲ, ಗಣಪತಿ, ಮಹಾವಾಕ್ಯ, ಗೋಪಾಲತಾಪಿನೀ, ಕೃಷ್ಣ, ಹಯಗ್ರೀವ, ದತ್ತಾತ್ರೇಯ ಮತ್ತು ಗರುಡ.

ಸುತ್ತಾರೆ. ತಮ್ಮ ವಾದವಾದ 'ನಾಮಪದಗಳೆಲ್ಲ ಧಾತು ಜನ್ಯ' ಎಂಬ ಸಿದ್ಧಾಂತವನ್ನು ಎಲ್ಲ ಪ್ರತಿ ಪಕ್ಷವಾದಗಳ ಖಂಡನೆಯ ಮೂಲಕ ಸಿದ್ಧಾಂತ ಮಾಡುತ್ತಾರೆ. ಯಾಸ್ಕರ ವಿಚಾರ ಸರಣಿಯು ಆಧುನಿಕ ಭಾಷಾಶಾಸ್ತ್ರದ ಸಂಶೋಧನೆ ಮತ್ತು ಸಿದ್ಧಾಂತಗಳಿಗೆ ಯಾವ ವಿಧದಲ್ಲಿಯೂ ಕಡಿಮೆ ಯಾಗಿಲ್ಲ. ಯಾಸ್ಕರು ಮುಂದೆ ವೇದಾಧ್ಯಯನದ ಫಲವನ್ನು ಕುರಿತು ವಿಚಾರಮಾಡಲು ಹೊರಟು ಮಂತ್ರಕ್ಕೆ ಅರ್ಥವುಂಟೇ ಇಲ್ಲವೇ ಎಂಬ ವಿಷಯ ದಲ್ಲಿ ದೀರ್ಘವಾದ ಚರ್ಚೆಯನ್ನು ಬೆಳೆಸುತ್ತಾರೆ. ಅವರ ಕಾಲಕ್ಕೇ ವೇದದ ಅನೇಕ ಭಾಗಗಳು ಅರ್ಥ ವಾಗುತ್ತಿರಲಿಲ್ಲವೆಂದು ಕಾಣುತ್ತದೆ. ಮೊದಲ ನೆಯ ಅಧ್ಯಾಯದಲ್ಲಿ ವೇದಾರ್ಥವನ್ನು ತಿಳಿದವರ ಪ್ರಶಂಸೆಯಿದೆ. ಎರಡನೆಯ ಅಧ್ಯಾಯದಲ್ಲಿ ಶಬ್ದ ವ್ಯುತ್ಪತ್ತಿಗೆ ಸಂಬಂಧಪಟ್ಟ ಕೆಲವು ನಿಯಮಗಳನ್ನು ತಿಳಿಸುತ್ತಾರೆ. ಎರಡನೆಯ ಅಧ್ಯಾಯದ ಐದನೆಯ ಖಂಡದಿಂದ ನೇರವಾದ ಶಬ್ದವಿವರಣೆ ಪ್ರಾರಂಭ ವಾಗುತ್ತದೆ.

ಯಾಸ್ಕರು ಪಾಣಿನಿಗಿಂತ ಪ್ರಾಚೀನರು. ನಿಘಂಟುವಿನ ಕರ್ತರು, ನಿರುಕ್ತದ ಯಾಸ್ಕರಿಗಿಂತ ಭಿನ್ನ ರೆಂದು ಕಾಣುತ್ತದೆ. ಯಾಸ್ಕರು ನಿರುಕ್ತದಲ್ಲಿ ನಿಘಂಟು ಪೂರ್ವಿಕರಾದ ಋಷಿಗಳಿಂದ ಪ್ರಣೀತ ವಾದುದೆಂದು ತಿಳಿಸುತ್ತಾರೆ. ಅಲ್ಲದೆ ಗ್ರಂಥಾಂತ್ಯ ದಲ್ಲಿ ನಿರುಕ್ತದ ಯಾಸ್ಕರು ಸಮಾಮ್ನಾಯದ ಆಚಾರ್ಯರಿಗೆ ನಮಸ್ಕಾರ ಮಾಡುತ್ತಾರೆ. ಇದ ರಿಂದ ಇವರು ಭಿನ್ನರೆಂದು ಊಹಿಸಬೇಕಾ ಗುತ್ತದೆ.

ಕಲ್ಪವು ಐದನೆಯ ವೇದಾಂಗ. ಯಜ್ಞ ಯಾಗಗಳಲ್ಲಿ ವೇದ ಮಂತ್ರಗಳನ್ನು ಉಪಯೋಗಿಸುವ ವಿಧಾನವನ್ನು ತಿಳಿಸುವ ಶಾಸ್ತ್ರವಿದು. ಬ್ರಾಹ್ಮಣಗಳ ಆಧಾರದ ಮೇಲೆಯೇ ರಚಿತ ವಾಗಿದೆ. ಇವುಗಳಲ್ಲಿ ಯಜ್ಞ ಸಂಬಂಧವಾದ ನಿಯಮಗಳು ಉಕ್ತವಾಗಿವೆ. ಬ್ರಾಹ್ಮಣಗಳಿಗಿಂತ ಇವು ಹೆಚ್ಚು ಪ್ರಯೋಗ ಶರಣಗಳಾಗಿವೆ. ಬೋಧಾಯನ ಕಲ್ಪಸೂತ್ರದ ವಿಷಯವಾಗಿ ಸಾಯಣರು ಈ ರೀತಿಯ ವಿವರಣೆಯನ್ನು ಕೊಟ್ಟಿದ್ದಾರೆ.“ತತ್ರ ತಾವದ್ವಿದ್ಯರ್ಥವಾದ ಮಂತ್ರಾತ್ಮನಾ ತ್ರಿಧಾ ವ್ಯವಸ್ಥಿತೋ ವೇದರಾಶಿಃ। ವಿಧಿವಿಹಿತ ಮರ್ಥವಾದ ಪ್ರರೋಚಿತಂ ಮಂತ್ರೇಣ ಸ್ಮೃತ ಮಭ್ಯುದಯಕಾರೀ ಭವತೀತಿ' ತತಶ್ಚ ಚೋದನಾಂ ಕರ್ಮಣಾಂ ಸುಖಾವಬೋಧಾಯ ಭಗವಾನ್ ಬೋಧಾಯನಃ ಕಲ್ಪಮಕಲ್ಪಯತ್ । ಯಥಾ ಬ್ರಾಹ್ಮಣಾ ಸಾಮಾನ್ಯತ್ವಂ ದುರವ ಬೋಧತಯಾ.... ಅತೋ ನ ತೈಃ ಸುಖಂ ಕರ್ಮಾವಬೋಧ ಇತಿಕಲ್ಪ ಸೂತ್ರಾಣೀಮಾನಿ ಪ್ರತಿನಿಯತ ಶಾಖಾಂತರಾನಂಗೀಚಕ್ರುಃ ಪೂರ್ವಾಚಾರ್ಯಃ ಕಲ್ಪಸ್ಯ ವೈಶದ್ಯ ಲಾಘವ ಕಾತ್ಸ್ನ್ಯಶ್ಚ ಪ್ರಕರಣ ಶುದ್ಧಿ ಭಿಃ ಪ್ರಕರ್ಷೈರ್ಯುಕ್ತಸ್ಯ”

ಕಲ್ಪಸೂತ್ರಗಳಲ್ಲಿ ಶ್ರೌತಸೂತ್ರ, ಗೃಹ್ಯಸೂತ್ರ ಧರ್ಮ ಸೂತ್ರ, ಶುಲ್ಬಸೂತ್ರಗಳೆಂದ ನಾಲ್ಕು ಭಾಗಗಳಿವೆ. ಶ್ರೌತಸೂತ್ರದಲ್ಲಿ ಯಜ್ಞಯಾಗಾದಿ ಗಳನ್ನು ಆಚರಿಸುವ ಕ್ರಮವೂ, ಅವುಗಳಲ್ಲಿ ಮಂತ್ರ ನಿಯೋಜನೆಯ ಕ್ರಮವೂ ಉಕ್ತವಾಗಿವೆ. ಗೃಹ್ಯ ಸೂತ್ರದಲ್ಲಿ ಚಾತುರ್ವರ್ಣ್ಯದವರಿಗೆ ಯೋಗ್ಯ ವಾದ ಷೋಡಶಕರ್ಮಗಳನ್ನು ವಿವರಿಸಿದೆ ಧರ್ಮಸೂತ್ರವು ಧರ್ಮನಿಯಮಗಳನ್ನು ತಿ ಸುತ್ತದೆ. ಶುಲ್ಬಸೂತ್ರವು ಯಜ್ಞೋಪಯುಕ್ತ ವಾದ ವೇದಿಕೆ,ಕುಂಡ-ಮೊದಲಾದುವುಗಳ ರಚನಾ ಕ್ರಮವನ್ನೂ ಅವುಗಳ ಪ್ರಮಾಣವನ್ನೂ ವಿಶ ಪಡಿಸುತ್ತದೆ.

ಆದಿಯಲ್ಲಿ ಪ್ರತಿಯೊಂದು ವೇದಶಾಖೆಗೂ ಪ್ರತ್ಯೇಕವಾದ ಈ ನಾಲ್ಕು ತೆರನಾದ ಕಲ್ಪ ಸೂತ್ರಗಳಿದ್ದಿರಬೇಕು. ಈಗ ಕೆಲವು ಮಾತ್ರ ಉಪಲಬ್ಧವಾಗಿವೆ. ಹೋತೃವಿಗೆ ಸಂಬಂಧ ಪಟ್ಟಂತೆ ಆಶ್ವಲಾಯನ ಮತ್ತು ಶಾಕಲಾಯನ ರಿಂದ ರಚಿತವಾದ ಎರಡು ಕಲ್ಪಸೂತ್ರಗಳಿವೆ. ಅಶ್ವಲಾಯನ ಶ್ರೌತಸೂತ್ರವು ಎರಡು ಭಾಗ ಗಳಾಗಿಯೂ, ಪ್ರತಿ ಭಾಗವೂ ಆರು ಅಧ್ಯಾಯ ಗಳಾಗಿಯೂ, ಒಂದೊಂದು ಅಧ್ಯಾಯವೂ ಅನೇಕ ಕಂಡಿಕೆಗಳಾಗಿಯೂ ವಿಭಾಗವಾಗಿದೆ. ಇವುಗಳಲ್ಲಿ ದರ್ಶ, ಪೌರ್ಣಮಾಸಾದಿ ಯಜ್ಞಗಳ ವಿವರಣೆ ಯದೆ. ಅಧ್ವರ್ಯುವಿಗೆ ಸಂಬಂಧಪಟ್ಟ ಕೃಷ್ಣ ಯಜುರ್ವೇದ ಶಾಖೆಗೆ ಬೋಧಾಯನ ಮತ್ತು ಆಪಸ್ತಂಭ ಸೂತ್ರಗಳಿವೆ. ಶುಕ್ಲಯಜುರ್ವೇದಕ್ಕೆ ಕಾತ್ಯಾಯನ ಸೂತ್ರವಿದೆ. ಸಾಮವೇದಕ್ಕೆ ಲ್ಯಾಟ್ಯಾಯನ ಮತ್ತು ದ್ರಾಹ್ಯಾಯಣ ಸೂತ್ರ ಗಳಿವೆ. ಅಥರ್ವವೇದಕ್ಕೆ ವೈತಾನ ಶ್ರೌತ ಸೂತ್ರ ಮತ್ತು ಕೌಶಿಕ ಗೃಹ್ಯ ಸೂತ್ರಗಳಿವೆ.

ವೈದಿಕ ಸಾಹಿತ್ಯದಲ್ಲಿ ಕಲ್ಪಸೂತ್ರಗಳು ಒಂದು ನವೀನ ಸಾಹಿತ್ಯ ಸ್ವರೂಪವನ್ನು ಪರಿಚಯಮಾಡಿ ಕೊಡುವುದಲ್ಲದೆ ಹಿಂದಿನ ಅನೇಕ ಬ್ರಾಹ್ಮಣ ಗಳನ್ನು ಮೂಲೆಗೆ ಕೂರಿಸಿದವು. ಆದುದರಿಂದಲೇ ಈಗ ಅನೇಕ ಬ್ರಾಹ್ಮಣಗಳು ಹೆಸರಿನಿಂದ ಮಾತ್ರ ಗೋಚರವಾಗಿವೆ. ಗೃಹ್ಯ ಮತ್ತು ಧರ್ಮ ಸೂತ್ರ ಗಳಿಗೆ ಸಾಮಯಾಚಾರಿಕ ಸೂತ್ರಗಳೆಂದೂ ಹೆಸ ರುಂಟು. ಇವುಗಳೇ ಮುಂದಿನ ಮನು ಮತ್ತು ಯಾಜ್ಞವಲ್ಕ್ಯ ಮೊದಲಾದ ಸ್ಮೃತಿಗಳಿಗೆ ಮೂಲ.

ಜ್ಯೋತಿಷ್ಯವು ಕೊನೆಯ ವೇದಾಂಗ. ವೈದಿಕ ಯಜ್ಞಗಳಿಗೆ ಯೋಗ್ಯವಾದ ಕಾಲನಿರ್ಣಯವನ್ನು

(33ನೇ ಪುಟ ನೋಡಿ)

# ಕಾಂಚನ ಸಂಭಾವ ಪಿತ್ನಾಲ ಬಿಂದಾ

ವಿದ್ವಾನ್ ಬ. ನ. ಗುಂಡೂರಾವ್

ಕುಮಾರವ್ಯಾಸ ಕವಿ ಕನ್ನಡಸಾಹಿತ್ಯದ ಕಾಮಧೇನು. ಕಲಿಯುಗವನ್ನು ದ್ವಾಪರವಾಗಿ ಮಾರ್ಪಡಿಸುವ ಮಾಂತ್ರಿಕ. ಚಿತ್ರೋಪಮವಾದ ಭಾಷೆಗೂ – ರೂಪಕಾಲಂಕಾರ ಪ್ರಯೋಗಕ್ಕೂ ಹೆಸರಾಂತ ಕವಿಸಾರ್ವಭೌಮ, ಸರಸ ಕವಿತಾ ಚತುರ. ಭಾಮಿನೀಷಟ್ಪದಿ ಛಂದಸ್ಸು ಈತನ ಕೈಲಿ ನಲಿದಾಡಿದಷ್ಟು, ಬಹುಶಃ ಇನ್ನಾವ ಕವಿಯ ಕೈಲೂ ನಲಿದಾಡಿಲ್ಲ. ಕನ್ನಡ ಸಾಹಿತ್ಯಾಕಾಶದ ಶಾಂತಸುಂದರಶಶಾಂಕ ಕುಮಾರವ್ಯಾಸನಿಗೆ ಶ್ರೀಕೃಷ್ಣನೆಂದರೆ ಮೈಯುಬ್ಬಿ ಹೋಗುತ್ತದೆ. ಅವನ ಲೇಖನಿಯಿಂದ ಅಮೃತಧಾರೆ ಪ್ರವಹಿಸತೊಡಗುತ್ತದೆ. ಭಕ್ತಿ ಮಂದಾಕಿನಿಯ ಲೋಲ ಲಹರಿಗಳು ಎದ್ದೆದ್ದು ಕುಣಿಯುತ್ತವೆ. ಭಾರತ ಈ ಕವಿಯ ದೃಷ್ಟಿಯಲ್ಲಿ ಕೃಷ್ಣ ಚರಿತಾಮೃತ.

ಪಾಂಡವರು ವನವಾಸ, ಅಜ್ಞಾತವಾಸಗಳನ್ನು ಮುಗಿಸಿದ್ದಾರೆ. ಅಜ್ಞಾತವಾಸದ ಪ್ರಮುಖ ಘಟನೆ ಉತ್ತರಗೋಗ್ರಹಣ. ಅಲ್ಲಿ ನಡೆದ ಯುದ್ಧವೆಂದರೆ ಪುಟ್ಟ ಕುರುಕ್ಷೇತ್ರವೇ!! ಕಿರೀಟಿಯ ಕೀರ್ತಿ ಮುಗಿಲು ಮುಟ್ಟಿದ್ದು ಉತ್ತರಗೋಗ್ರಹಣದ ಲಯೋಗ್ರಭೀಕರಸಂಗ್ರಾಮದಲ್ಲಿ. ವಿರಾಟ ಚಕ್ರವರ್ತಿ ಪಾಂಡವರನ್ನು ಒಂದು ವರ್ಷಕಾಲ ಪೋಷಿಸಿದ್ದ. ಆ ಸೌಜನ್ಯಕ್ಕೆ ಕಟ್ಟುಬಿದ್ದು–ಆತನ ಮನವಿಯನ್ನಂಗೀಕರಿಸಿ–ಪಾರ್ಥ, ಉತ್ತರೆಯನ್ನು ತನ್ನ ಸೊಸೆಯಾಗಿ ತಂದು ಕೊಂಡ. ಹರಿಕಿಶೋರ ಅಭಿಮನ್ಯುವಿನ ವಿವಾಹಮಂಗಳಮಹೋತ್ಸವಕ್ಕಾಗಿ, ಯದುವಂಶ ಶಿಖಾಮಣಿ–ಪಾಂಡವರಕ್ಷಾಮಣಿ–ಶ್ರೀಕೃಷ್ಣ ಬಿಜಯಮಾಡಿಸಿದ್ದ, ಈ ಸಂದರ್ಭವನ್ನುಪಯೋಗಿಸಿಕೊಂಡು, ಪಾಂಡವರ ಭವಿಷ್ಯದ ಬಗ್ಗೆ–ಸೇರಿದ್ದ ರಾಜ ಮಹಾರಾಜರಲ್ಲಿ ಸೂಕ್ಷ್ಮವಾಗಿ ಪ್ರಸ್ತಾಪ ಮಾಡಿದ ಕೃಷ್ಣ ಕೊನೆಗೆ ರಾಯಭಾರಕ್ಕಾಗಿ ತಾನೇ ಹಸ್ತಿನಾವತಿಗೆ ಹೊರಡಲು ತೀರ್ಮಾನಿಸಿದ. ಇದು ಶ್ರೀಮನ್ಮಹಾಭಾರತದಲ್ಲಿ ಅನುಪಮ ಸನ್ನಿವೇಶ. ಕುಮಾರವ್ಯಾಸ ಭಾರತದಲ್ಲಿ ಪಾವನತರವಾದ ರಸಮಯ ಸನ್ನಿವೇಶ. ಭಕ್ತಕವಿ ಮಯೂರಕ್ಕೆ ಸಂತೋಷಸಂಭ್ರಮದಿಂದ ಗರಿಗೆದರಿ ನರ್ತಿಸಲು ಸದವಕಾಶ.

ಶ್ರೀಕೃಷ್ಣ ರಾಯಭಾರಕ್ಕೆ ಹೊರಡುವ ಮುಂಚೆ ಪಾಂಡವರ ಅಭಿಪ್ರಾಯವನ್ನು ಸ್ಪಷ್ಟವಾಗಿ ತಿಳಿದುಕೊಳ್ಳುವುದು ಅನಿವಾರ್ಯವಾಗಿತ್ತು. ಒಬ್ಬೊಬ್ಬರನ್ನೂ ಪ್ರತ್ಯೇಕ ಪ್ರತ್ಯೇಕವಾಗಿ ಕರೆದು ನಿರ್ಭಯವಾಗಿ ನಿಸ್ಸಂಕೋಚವಾಗಿ ಅಭಿಪ್ರಾಯ ಹೇಳಬೇಕೆಂದು ಕೇಳಿದಾಗ ಮೊದಲು ಪಾಂಡುಜ್ಯೇಷ್ಠನಾದ ಧರ್ಮಮೂರ್ತಿ ಹೇಳಿದ–

“ಅಳಿವುವೊಡಲುಗಳವನಿ ಸಾಗರ ವಳಯ ಉಳಿವುದು ಕೀರ್ತಿ–ನಶ್ವರವಾದ ಈ ಭೂಮಿಗಾಗಿ ಸಹೋದರರು ಕಚ್ಚಾಡಿ ಸಾಯುವುದು ನಮ್ಮ ಭರತ ಕುಲಕ್ಕೆ ಭೂಷಣವೇನಲ್ಲ. ಮಾನವ ಸತ್ಕೀರ್ತಿಗಾಗಿ ಬಾಳಬೇಕೇ ಹೊರತು–ಅಪಕೀರ್ತಿ ಪಡೆಯುವುದು ಶುದ್ಧ ಮೂರ್ಖತನ. ಅದ್ದರಿಂದ ವಿಶಾಲ ಸಾಮ್ರಾಜ್ಯದ ಯಾವುದೋ ಮೂಲೆಯಲ್ಲಿ ಐದು ಹಳ್ಳಿಗಳನ್ನು ನಮಗೆ ಕೊಟ್ಟರೂ ಆಯ್ತು–ಅದೇ ಮಹಾಪ್ರಸಾದವೆಂದು ನಾವು ಸಂತೋಷ ಪಡುತ್ತೇವೆ. ವ್ಯಥಾರಕ್ತಪಾತ ನನಗೆ ಖಂಡಿತ ಸಮ್ಮತವಿಲ್ಲ”.

ಧರ್ಮಜನ ಗಂಭೀರ ವಿಚಾರಧಾರೆ ಕೇಳಿ ಕೃಷ್ಣ ಸಂತೋಷಪಟ್ಟ. ಭೀಮಸೇನನನ್ನು ಕೇಳಿದಾಗ ಆತ– ಅಗ್ರಜನ ಮಾತೇ ನನ್ನ ಮಾತು. ಯುದ್ಧದಿಂದ ಉಭಯ ಪಕ್ಷಗಳವರಿಗೂ ಅಪಾರನಷ್ಟವೇ ಹೊರತು. ಲಾಭವಿಲ್ಲ-ಎಂದ. ಭೀಮಸೇನನು ಇಷ್ಟು ಸೌಮ್ಯವಾಗಿ – ವಿನಯವಾಗಿ – ಮಾತಾಡಿದ್ದನ್ನು ಯಾರು ಕಾಣರು. ಕೃಷ್ಣನಿಗಂತೂ ಪರಮಾಶ್ಚರ್ಯವಾಯ್ತು. ಹಲಾಹಲ ಸುಧಾರಸವಾದರೆ ಯಾರಿಗಾದರೂ ಸೋಜಿಗವೇ!! ಕೌರವರೆಂದ ಕೂಡಲೇ ಸಿಡಿಲಿನಂತೆ ಅಬ್ಬರಿಸುತ್ತಿದ್ದ, ಪವಮಾನನಂದನನ ಪೌರುಷಜ್ವಾಲೆ ನಂದಿ ಹೋಯ್ತೇನು? ಇದು ಸಂಪೂರ್ಣ ಅನಿರೀಕ್ಷಿತಘಟನೆ. ಆ ಸಮಯದಲ್ಲಿ ಭೀಮನನ್ನು ಕೃಷ್ಣ ಹೆಚ್ಚು ಮಾತಾಡಿಸಲಿಲ್ಲ. ಪೌರುಷದ ತಂತಿ ಮಿಡಿಯುವ ಕ್ರಮವೇ ಬೇರೆ ಇತ್ತು, ಆಗ ಹೊರಡುವ ಗುಡುಗುಸಿಡಿಲಾಟೋಪವೇ ಬೇರೆ ಇತ್ತು. ಇದನ್ನು ಬಲ್ಲ ಮುರಹರಿ ನಸುನಗುತ್ತ ಪಾರ್ಥನನ್ನು ಪ್ರಶ್ನಿಸಿದ. ಅರ್ಜುನ ಕೃಷ್ಣನ ಗರಡಿಯಲ್ಲಿ ಸಾಕಷ್ಟು ಪಳಗಿದ್ದವನು. ಯಾರೇನು ಮಾತಾಡಿದರೇನು ಫಲ. ಸ್ವಾಮಿ ಸಂಕಲ್ಪದಂತೆ ಜಗತ್ತಿನಲ್ಲಿ ಕೆಲಸಗಳಾಗುತ್ತವೆಂದು ಬಲ್ಲ ಅರ್ಜುನ, ಕೃಷ್ಣನಿಗೆ ಕೈಮುಗಿದು. ‘ನಿನ್ನ ಆಜ್ಞೆ ನನಗೆ ಶಿರೋಧಾರ್ಯ. ನಿನ್ನಿಷ್ಟದಂತೆ ಕಾರ್ಯಮಾಡಬಹುದು. ನಿನಗೆ ತಿಳಿಯದ ವಿಚಾರವೇನುಂಟು?’ ಎಂದು ನುಸುಳಿಕೊಂಡ ನಕುಲನೂ ಅಷ್ಟೆ–ಯಾರಿಗೂ ತೊಂದರೆಯಾಗದಂತೆ ವಿಚಾರಮಾಡಿ ಸಮಸ್ಯೆಯನ್ನು ಬಗೆಹರಿಸೆಂದ. ಸಹದೇವನಿಗೆ ಇವರ ಅಭಿಪ್ರಾಯಗಳು ಸರಿದೋರಲಿಲ್ಲ. ಸೇರದು ಸಂಧಿ; ಯುದ್ಧವೇ ಸಿದ್ಧ–ಎಂದ. ಐದು ಜನರ ಅಭಿಪ್ರಾಯ ಐದು ರೀತಿಯಾದಂತಾಯ್ತು!! ಶ್ರೀಕೃಷ್ಣ ಇಷ್ಟಕ್ಕೆ ಸುಮ್ಮನಾಗಲಿಲ್ಲ. ದ್ರೌಪದಿಯ ಅಭಿಮತವೂ ಆತನಿಗೆ ಬೇಕಾಗಿತ್ತು. ಇದರಲ್ಲಿ ಆತನ ವ್ಯವಹಾರ ನೈಪುಣ್ಯವೂ ಸೇರಿತ್ತು. ದ್ರೌಪದಿ ಕೌರವರಿಂದ ತುಂಬ ನೊಂದಿದ್ದ, ಅವಮಾನ ಪಟ್ಟಿದ್ದ ಜೀವ. ಅದೂ ಅಲ್ಲದೆ ಕುಟುಂಬ ವ್ಯವಹಾರದಲ್ಲಿ ಗಂಡಿನ ಅಭಿಪ್ರಾಯವೇನೇ ಇರಲಿ ಅಂತಿಮ ನಿರ್ಧಾರ ಸಾಮಾನ್ಯವಾಗಿ ಹೆಣ್ಣಿನದೇ ಆಗಿರುತ್ತದೆ. ಆಕೆಯ ಅಭಿಪ್ರಾಯಕ್ಕೆ ಗಂಡು, ಇಷ್ಟವಿರಲಿ–ಇಲ್ಲದಿರಲಿ – ಒಪ್ಪಬೇಕಾಗುತ್ತದೆ. ಶ್ರೀಕೃಷ್ಣ ಸಂಧಿ ಪ್ರಸ್ತಾಪದ ವಿಷಯದಲ್ಲಿ ಪಾಂಚಾಲಿಯಭಿಮತ ಪಡೆಯ ಬಯಸಿದ್ದರಲ್ಲಿ ಔಚಿತ್ಯವಿದೆ. ಮಹಾಭಾರತದಲ್ಲಿ ಈಕೆಯ ಪಾತ್ರ ಮಹತ್ವಪೂರ್ಣವಾದದ್ದು.

ಗಂಡಂದಿರ ತೀರ್ಮಾನ ಕೇಳಿ ದ್ರೌಪದಿ ಕುಪಿತಳಾದಳು. ಆಕೆ ಅಗ್ನಿಸಂಭವೆಯಲ್ಲವೇ! ಪಾಪಿಗಳಿರಿದರೊ ಸತಿಯ–ಎಂಬ ಕಟುವಾಕ್ಯವೂ ಆಕೆಯ ಬಾಯಿಂದ ಬಂತು. ಭ್ರೂಲತೆಯ ಕಾಮನ ಬಿಲ್ಲಿನಂತೆ, ಆಜಾನುವಿಲಂಬಿತ ಮುಕ್ತಕೇಶಾವಳಿ ಕಾರ್ಮುಗಿಲಿನಂತೆ–ಕಣ್ಣನೋಟವೇ ತೀಕ್ಷ್ಣವಾದ ಮಿಂಚಿನಂತೆ, ನೂಪುರ ಧ್ವನಿಯೇ ಗುಡುಗುಸಿಡಿಲುಗಳಂತೆ–ಆಕೆ ಸಭೆಗೆ ಬಂದ ಪರಿಸೆ–ಬಂದರೀತಿಯೇ ಬಿರುಸಾದ ಮುಂಗಾರು ಮಳೆಗಾಲವನ್ನು ನೆನಪಿಗೆ ತರುತ್ತಿತ್ತು. ಸಭೆಯಲ್ಲಿ ಆಕೆ ಮೊಟ್ಟಮೊದಲು ತರಾಟೆಗೆ ತೆಗೆದುಕೊಂಡದ್ದು ಸಮೀರಾತ್ಮಜನನ್ನು!! ಕಲಿತನವ ನೀರೊಳು ಕಲಕಿದೆಯ ಭೀಮಸೇನ? ಪೌರುಷದ ದಾವಾಗ್ನಿ ನಂದಿ ಹೋಯ್ತೇನು? ಹೆಡೆಯೆತ್ತಿ ಬುಸುಗುಟ್ಟಬೇಕಾದ ಚಲಸಾಗರ ಸತ್ತು ಹೋಯ್ತೇ? ನೀವು ಗಂಡರೋ-ಭಂಡರೋ – ಷಂಡರೊ? ನನಗರ್ಥವಾಗುತ್ತಿಲ್ಲ. ರೋಷಚ್ಯುತರಾದ ನತಪ್ರಷ್ಟ ಜೀವಿಗಳ ಬಾಳು ಏತರ ಬಾಳು? ನೀವು ನೀವು ಅಣ್ಣತಮ್ಮಂದಿರೆಲ್ಲ ಒಂದೇ–ನಾನು ತಾನೆ ಹೊರಗಿನವಳು? ನಾನು ಪಂಭವಾಗ್ನಿಯಲ್ಲಿ ನೊಂದು ಬೆಂದವಳು? ತುಂಬಿದ

ಸಭೆಯಲ್ಲಿ-ಜಗತ್ತಿನ ಯಾವ ಹೆಂಗಸೂ ಅನುಭವಿಸಿಲಾರದಂತಹ ದಾರುಣ ಅಪಮಾನಕ್ಕೆ ಗುರಿಯಾದವಳು ನಾನು ತಾನೆ? ಕೃಷ್ಣ–ಆಗಲೂ ನನ್ನ ಮಾನರಕ್ಷಣೆಮಾಡಿದವನು ನೀನೆ. ಈಗಲೂ ಕಾಪಾಡಬೇಕಾದವನು ನೀನೆ. ನೀಚರಾದ ಧಾರ್ತ ರಾಷ್ಟ್ರರೊಡನೆ ಸಂಧಿಮಾಡಿಕೊಳ್ಳುವುದೆಂದರೆ ಇದಕ್ಕಿಂತ ನಾಚಿಕೆಗೇಡಿನ ಸಂಗತಿ ಬೇರೊಂದಿರಲಾರದು. ನನಗಂತೂ ಇದು ಎಳ್ಳಷ್ಟೂ ಇಷ್ಟವಿಲ್ಲ. ತನಯರೈವರು, ವೀರಸಹದೇವ, ಘಟೋತ್ಕಚ, ಅಭಿಮನ್ಯು–ನನ್ನ ತಂದೆ ಮತ್ತು ಆತನ ಮೂರ ಕ್ಷೋಹಿಣಿ ಸೈನ್ಯ–ಇಷ್ಟೇ ಜನರ ನೆರವು ಪಡೆದು ಯುದ್ಧ ನಡೆಸೇ ತೀರಬೇಕು. ದುಃಶಾಸನನ ರಕ್ತ ಕುಡಿದು ಕುರುಕುಲವನ ಸುಟ್ಟೇ ತೀರಬೇಕು. ಬಕಾಸುರ-ಕಿಮ್ಮೀರಾದಿ ರಾಕ್ಷಸರನ್ನು ಸದೆಬಡಿದು, ಕೀಚಕರ ಗುಂಪನ್ನು ಹುಟ್ಟಡಗಿಸಿ – ಲೋಕ ವಿಖ್ಯಾತ ಪೌರುಷಸಂಪನ್ನನೆಂಬ ಕೀರ್ತಿಗೆ ಪಾತ್ರನಾದ ಅಸಮಾನ ಪರಾಕ್ರಮಿ ಭೀಮ ಸೇನನೇ ಸಂಧಿಗೆ ಒಪ್ಪಿದನೆಂದರೆ–ನನ್ನ ಪುಣ್ಯಕ್ಕೆ ಣೆಯೇ ಇಲ್ಲ–ಎಂದು ಮೂದಲಿಸಿ ನುಡಿದಳು. ಅದು ಮಾತೇ? ಬೀಸಿ ಹೊಡೆದ ಕಶಾಘಾತವೇ? ಸಿಡಿಲೇ? ಗುಡುಗೇ? ಪ್ರತೀಕಾರದ ಘೋರ ದಾವಾಗ್ನಿಯ ಜ್ವಾಲೆಗಳೇ? ಕೆಣಕಿ ಕೆರಳಿಸುವ ನಾರೀಸಹಜವಾದ ವಾಗ್ಧೋರಣೆಯೆ? ಭುಗಿಲೆದ್ದ ಜ್ವಾಲಾಮುಖಿಯೆ?

ಪಾಂಚಾಲಿಯ ಮೂದಲಿಕೆಯ ಮಾತುಗಳು ಭೀಮಸೇನನನ್ನು ಹೊಡೆದೆಬ್ಬಿಸಿದವು. ವರಸತಿಯ ಬಿಸುಸುಯ್ಲು ಗಾಳಿಯೊಳುರಿ ಚಡಾಳಿಸೆ ರೋಷ ಮಯದುಬ್ಬರದೊಳು ಔಡೊತ್ತಿದನು. ಕೆಡಹಿ ರಿಪುವನು ಕರುಳ ದಂಡೆಯ ಮುಡಿಸುವೆನು ಮಾನಿನಿಗೆ. ತತ್ಸಹೋದರರ ರಕ್ತವ ಕುಡಿಯಲೆರೆವೆನು ಶಾಕಿನಿಯರಿಗೆ, ಸೈರಿಸು ಸೈರಿಸು ಪಾಂಚಾಲಿ ನಿನ್ನೀ ಸುರಿವ ಕಂಬನಿಗಳಿಗೆ ಶತಸಾವಿರ ಮಡಿಯ ಕಂಬನಿಯ ಸುರಿಸುವೆ ಹಗೆಯ ಹೆಂಡಿರ ಕಂಗಳಲಿ–ಎಂದು ಭೀಮಸೇನ–ಆ ಪ್ರಳಯಂಕರೀಶಕ್ತಿ–ಗುಡುಗಿದ. ಸಭೆ ನಡುಗಿ ಹೋಯ್ತು. ಕೌರವನಲ್ಲಿ ಸಂಧಿ ಬೇಕಿಲ್ಲ. ಸಮರವೇ ನನ್ನ ತೀರ್ಮಾನ – ಧಾರ್ತ ರಾಷ್ಟ್ರರ ಹುಟ್ಟಡಗಿಸಿ ಬಿಡುತ್ತೇನೆ–ಎಂದು ಆ ಕರುಕುಲ ಪ್ರಳಯಕೇತು ತನ್ನ ನೈಜ ಅಭಿಪ್ರಾಯವನ್ನು ಕೃಷ್ಣನಿಗೆ ಸೂಚಿಸಿದ. ಬೆಂಕಿಯ ಮಗಳು–ಗಾಳಿಯ ಮಗ!! ಬೆಂಕಿ–ಗಾಳಿ ಇವೆರಡೂ ಒಂದಾಗಿ ಕೆರಳಿ ನಿಂತಾಗ ಎದುರಿಸಿ ನಿಲ್ಲಬಲ್ಲ ಗಂಡು ಜಗತ್ತಿನಲ್ಲುಂಟೇ?

ಸಂಧಿ ಪ್ರಸ್ತಾಪ ಮಾಡಲು ಹೋಗುವುದು ಕೇವಲ ಸಂಪ್ರದಾಯವೇ ಹೊರತು ಸಂಧಿಯಂತೂ ಆಗಲಾರದೆಂದೇ ಮುರಾರಿಯಭಿಮತ. 'ಕೌರವರ ಸಭೆಯಲ್ಲಿ ಈ ಬಗ್ಗೆ ಮಾತಾಡುವಾಗ ಬಿಚ್ಚಿರುವ ನನ್ನ ತಲೆಗೂದಲು ನೆನಪಿರಲಿ. ದುರುಳ ದುಶ್ಶಾಸನನಿಂದ ನನಗಾದ ದಾರುಣ ಅಪಮಾನ ನೆನಪಿರಲಿ'–ಎಂದು ಪಾಂಚಾಲಿ ಬಾರಿಬಾರಿಗೂ ಮನವಿ ಮಾಡಿಕೊಂಡಳು. ಕೃಷ್ಣ ಆಕೆಗೆ ಸೂಕ್ತ ಸಮಾಧಾನ ಹೇಳುತ್ತ–ಯುದ್ಧವನ್ನೇ ನಿರ್ಣಯಿಸಿಕೊಂಡು ಬರುತ್ತೇನೆ. ಸಂಧಿ ಪ್ರಸ್ತಾಪದ ಮಾತು ಕೇವಲ ನೆಪ. ಒಂದುವೇಳೆ ನಿಮ್ಮವರೆಲ್ಲ ಯುದ್ಧಕ್ಕೆ ಹಿಂದೇಟು ಹೊಡೆದರೆ–ರಿಪುಗಳ ಸೀಳಿ ಕರುಳನು ಮುಡಿಸುವೆನು ನಿನ್ನ ಕಬರಿಯಲಿ–ಎಂದು ಆರ್ತಜನ ಸಂಕರ್ಷಕನಾದ ಸ್ವಾಮಿ ಅಭಯ ಪ್ರದಾನ ಮಾಡಿದಾಗ ದ್ರೌಪದಿಗೆ ಸಮಾಧಾನವಾಯ್ತು.

ಹಸ್ತಿನಾವತಿಗೆ ಹೊರಡಲು ಪ್ರಯಾಣ ಸಿದ್ಧತೆ ಭರದಿಂದ ಸಾಗಿತು. ಕನಕರಥ–ಅದರಲ್ಲಿ ದಿವ್ಯಾಯುಧಗಳು–ಕನಕಕವಚ–ಕೃಪಾಣ ಎಲ್ಲವೂ ಅಣಿಯಾಯ್ತು. ಸಾತ್ಯಕಿ ಮುಂತಾದ ಆಪ್ತವರ್ಗದವರು ಕೃಷ್ಣನೊಡನೆ ಹೊರಡುವುದೆಂದು ತೀರ್ಮಾನವಾಯ್ತು. ಸುಮುಹೂರ್ತ ನಿರ್ಣಯಿಸಲಾಯ್ತು. ಅಮಲಚ್ಛತ್ರ ಚಾಮರ ಸಿತಪತಾಕೆಗಳು, ಚತುರಂಗ ಸೈನ್ಯ ಎಲ್ಲವೂ ಸಿದ್ಧವಾದವು. ಈ ಪ್ರಯಾಣಕ್ಕೊಂದು ವಿಶೇಷ ಮಹತ್ತ್ವವಿತ್ತು. ಪಾಂಡವರ ಭಾಗ್ಯನಿರ್ಣಯ–ಕೌರವರ ಭಾಗ್ಯನಿರ್ಣಯ ಎರಡೂ ಆಗಬೇಕಾಗಿತ್ತು. ಸ್ವಾಮಿಯ ಸಂಕಲ್ಪ ಜಾರಿಯಾಗಬೇಕಾಗಿದ್ದ ಸಂದರ್ಭವದು. ಭಕ್ತ ಕಲ್ಪತರುವೆಂಬ ತನ್ನ ಬಿರುದನ್ನು ಸಾರ್ಥಕ ಪಡಿಸಿಕೊಳ್ಳಲು ಕೃಷ್ಣ ತಾನೇ ಒಂದು ಸನ್ನಿವೇಶವನ್ನು ಕಲ್ಪಿಸಿದ. ದಾನವಕುಲ ದಿಶಾಪಟ ಕೃಷ್ಣ ಬಿಜಯಂಗೈದ ಹಸ್ತಿನೆಗೆ!!

ಮಾರ್ಗ ಮಧ್ಯದಲ್ಲಿ ನಾರದ, ಶುಕ, ಪರಾಶರ ಭರದ್ವಾಜ, ಗೌತಮರೇ ಮುಂತಾದ ತಪೋಧನರು ಸ್ವಾಮಿಯ ದರ್ಶನ ಪಡೆದು–ಹಸ್ತಿನಾವತಿಗೆ ತಾವೂ ಬರಬೇಕೆಂಬ ಆಸೆಯನ್ನು ವ್ಯಕ್ತಪಡಿಸಿದರು. ವೇದಪುರುಷನ ಬಾಯಿಂದ ಬರುವ ಅಣಿಮುತ್ತುಗಳಂತಹ ಧರ್ಮಸೂಕ್ಷ್ಮಗಳನ್ನು ಅವರು ಕೇಳ ಬಯಸಿದರು. ನ ಭೂತೋ ನ ಭವಿಷ್ಯತಿ–ಎಂಬಂತಹ ಧರ್ಮನಿರೂಪಣಾವೈಖರಿಯನ್ನು ಕಾಣ ಬಯಸಿದರು. ಮಹರ್ಷಿಗಳ ಕೋರಿಕೆಯನ್ನು ಮುಕುಂದ, ಮುಗುಳ್ನಗೆಯಿಂದ ಸ್ವೀಕರಿಸಿದ ಮತ್ತೆ ಪಯಣ ಮುಂದುವರಿಯಿತು.

ಕೃಷ್ಣನಾಗಮನವಾರ್ತೆ ಅಧಿಕೃತವಾಗಿ ಹಸ್ತಿನಾವತಿಗೆ ತಲುಪಿದಾಗ ಆತನ ಸ್ವಾಗತಕ್ಕಾಗಿ ಅದ್ದೂರಿಯಾದ ಏರ್ಪಾಟು ನಡೆಸಲಾಯ್ತು. ಇದರಲ್ಲಿ ವಿಶ್ವಾಸಕ್ಕಿಂತಲೂ – ಭಕ್ತಿಗೌರವಕ್ಕಿಂತಲೂ–ದರ್ಪ ಅಹಂಕಾರಗಳೇ ಎದ್ದು ಕಾಣು

ತ್ತಿತ್ತು. "ನಗರಿಗಾತನು ಬರಲಿ, ಯಾದವನ ಅಗಡುತನಕೌಷಧಿಯುಬಲ್ಲೆನು, ಬಿಗಿದುಕೆಡಹುವೆನೆಂದು ನುಡಿದನು ಕೌರವರ ರಾಯ!!" ಇದು ದುಷ್ಟ ಚತುಷ್ಟಯ ಸಮಿತಿಯಲ್ಲಿ ಕೈಗೊಳ್ಳಲಾಗಿದ್ದ ನಿರ್ಣಯ!!

ತನ್ನ ಆರಾಧ್ಯ ದೇವನೂ, ದೇವದೇವೋತ್ತಮನೂ, ದೇವತಾ ಸಾರ್ವಭೌಮನೂ ಆದ ಕೃಷ್ಣ ಹಸ್ತಿನೆಗೆ ರಾಯಭಾರಕ್ಕಾಗಿ ಬರುವ ಗಂಭೀರ ಸಂದರ್ಭವನ್ನು ಬರೆಯುವಾಗ, ಕವಿ ಕುಮಾರವ್ಯಾಸನ ಉತ್ಸಾಹ–ಆನಂದ–ಸಂಭ್ರಮಗಳು, ಕಾವ್ಯದ ಪ್ರತಿಮಾತಿನಲ್ಲೂ ಎದ್ದು ಕಾಣುವಂತಿವೆ. ಏಕೆಂದರೆ ಅದು ಭಕ್ತಿ ಪ್ರಚೋದಿತವಾದ ಕಾವ್ಯ. ಕವಿಯ ದೃಷ್ಟಿಯಲ್ಲಿ ಭಾರತವೆಂದರೆ ಕೃಷ್ಣಕಥೆ–ಪಂಚಮ ಶ್ರುತಿಯನೊರೆವೆನು ಕೃಷ್ಣ ಮೆಚ್ಚಲಿಕೆ–ಎಂಬುದೇ ಕವಿಯ ವೀರ ಪ್ರತಿಜ್ಞೆ. ಕುಮಾರವ್ಯಾಸ ಮೊದಲು ಭಕ್ತ–ಆ ನಂತರ ಕವಿ!! ಕವಿತೆ ದೈವಸಾಕ್ಷಾತ್ಕಾರಕ್ಕೊಂದು ನೆಪ. ಸ್ವಾಮಿಯ ಅನಂತ ಗುಣಶಕ್ತಿಗಳನ್ನು ಸ್ತುತಿಸಲು ಒಂದು ನೆಪ–ಅಷ್ಟೆ. ಕಾವ್ಯದ ಧನ್ಯತೆ ಇರುವುದೇ ಭಕ್ತಿಯ ಪರಾಕಾಷ್ಠೆಯಲ್ಲಿ. ಕಾವ್ಯಗಂಗೆ ಹೊರಡುವುದೇ ಭಕ್ತಿಪರ್ವತದಿಂದ. ಭಕ್ತಿಯೊಂದು ರಸಾತ್ಮಕ ಅನುಭೂತಿ. ಭಕ್ತಿರಸಲಿಪ್ತವಲ್ಲದ ಕಾವ್ಯ, ಶಾಶ್ವತ ಮೌಲ್ಯವನ್ನು ಪಡೆಯಲಾರದು. ಕಾವ್ಯಂ ಕಲ್ಪಾಂತರ ಸ್ಥಾಯಿ–Epics are eternal–ಎಂಬ ಮಾತಿದೆ. ಅಂತಹ ಶಾಶ್ವತಮಹತ್ತ್ವ ಕಾವ್ಯಕ್ಕೆ ಬರಬೇಕಾದರೆ, ಭಕ್ತಿಯೇ ಪ್ರಧಾನ ಕಾರಣ.

ತಲೆಬಾಗಿ ನಮಿಸುವ ರಸಾಲವೃಕ್ಷಗಳು. ಕೈಬೀಸಿ ಕರೆಯುವ ಸಾಲವೃಕ್ಷಗಳು–ಹೂಹಾಸಿ ಸ್ವಾಗತಿಸುವ ತಮಾಲ ವೃಕ್ಷಗಳು. ಗಿಳಿಯ ತುಂಬಿಯ ಕೋಗಿಲೆಯ ನವಿಲು ಪಾರಿವದ ಕಲರುಚಿಯ ಕರ್ಣಾಮೃತದ ತನಿಮಳೆ. ದಾರಿಯುದ್ದಕ್ಕೂ ಶುಭಶಕುನಗಳು. ಹಸ್ತಿನಾವತಿಯ ಅಲಂಕೃತರಾಜಬೀದಿಗಳು-ಸಾಲುಗಟ್ಟಿ ನಿಂತುನಮಿಸುವ ಸಮವಸ್ತ್ರಧಾರಿ ಸೈನಿಕವೃಂದ–ಮಂಗಳವಾದ್ಯಗಳು–ಮಂಗಳ ವಸ್ತುಗಳನ್ನು ಹಿಡಿದು ನಸುನಗೆಯ ಸೂಸುತ್ತ ನಿಂತಿರುವ ಸುಮಂಗಲಿಯರ ಸಂದೋಹ. ಎಲ್ಲಿ ನೋಡಿದರೂ ತಳಿರು ತೋರಣಗಳು. ಅರವಿಂದನಾಭನ ಚರಣಾರವಿಂದಗಳಿಗೆ ದಾರಿಯುದ್ದಕ್ಕೂ ಹಾಸಲಾಗಿದ್ದ ಕುಸುಮರಾಜಿ. ಉಪ್ಪರಿಗೆಗಳ ಮೇಲೆ ನಿಂತು ಅರಳು ಮುತ್ತುಗಳನ್ನು ಬೆರೆಸಿ ಚೆಲ್ಲುತ್ತಿರುವ ಮಹಾಜನಸ್ತೋಮ. ಆವ ದೇಸಿ ಇದಾವ ವಿಸ್ತರವಾವ ದೇಶದ ಸಿರಿಯಸಡಗರವಾವ ಪರಿಯ ವಿಲಾಸ–ಎನ್ನುತ್ತಾನೆ ಕವಿ ಕುಮಾರವ್ಯಾಸ!! ಸಿರಿಲೋಲನಾಗಮನದ ರಮಣೀಯ ವೈಭವವನ್ನು ಕಂಡ ಜೀವರ ಜನ್ಮ ಜನ್ಮಾಂತರದ ದುರಿತಾಂಬೋಧಿ ಬತ್ತಿದವು, ತೊಲಗಿದವು ಜನಮನದ ಬಲುಗತ್ತಲೆಗಳು.

ಛಲದಂಕಮಲ್ಲನಾದ ಫಣಿರಾಜಕೇತನ ದುರ್ಯೋಧನ, ತನ್ನರಮನೆಯಲ್ಲಿ ರಾಜವೈಭವದ ಭೋಜನ ವ್ಯವಸ್ಥೆ ಮಾಡಿಸಿದ್ದ–ಹರಿ ತನ್ನ ಮನೆಗೆ ಬಂದೇ ಬರುತ್ತಾನೆಂಬ ಗಾಢಗರ್ವದಿಂದ!! ಆದರೇನು? ಭಕ್ತಜನಮಂದಾರನಾದ ಶ್ರೀಹರಿ, ಪರಭಾಗವತಮಸ್ತಕರತ್ನ ವಿದುರನ ಮನೆಗೆ ನಡೆತಂದ!! ಪದುಮನಾಭ ತಾ ನಡೆದು ಬರುವುದು ವಿದುರನ ಭಾಗ್ಯವಲ್ಲದೆ ಮತ್ತೇನು!! ವಿದುರ, ಭಾಗವತೋತ್ತಮ; ಧರ್ಮವತ್ಸಲ; ನೀತಿನಿಪುಣ-ವಿನಯಶೀಲ; ಭಗವದರ್ಪಿತ ಜೀವ. ಆತ ಹಸ್ತಿನೆಯ ಪ್ರಭುವಲ್ಲ, ಸಿರಿವಂತನಲ್ಲ-ಸಾಮಂತರಾಜನಲ್ಲ; ಅವನ ಮನೆಯರಮನೆಯೂ ಅಲ್ಲ. ಸರ್ವಸಾಧಾರಣ ರೀತಿಯಲ್ಲಿ ಬಾಳುತ್ತಿದ್ದ ಅಸಾಧಾರಣ ಪುಣ್ಯಜೀವಿಯಾತ. ಪಾಂಡವರು ವನವಾಸಕ್ಕೆ ಹೊರಟಂದಿನಿಂದ ಕುಂತೀದೇವಿಯನ್ನು ಪರಮ ಗೌರವದಿಂದ ಪೋಷಣೆ ಮಾಡುತ್ತಿರುವ ಸೌಜನ್ಯಶೀಲ – ವೈರಾಗ್ಯ ಶಿರೋಮಣಿಯಾದ ವಿದುರನನ್ನು ಕಂಡರೆ ಕೃಷ್ಣನಿಗೆ ಅದೇನೋ ಪ್ರೀತಿ. ಅದೇನೋ ವಾತ್ಸಲ್ಯ–ಅದೇನೋ ಗೌರವ ಅತೀವ ಮೇ ಪ್ರಿಯಃ ಎಂಬಂತೆ!! ವಿದುರ ತನ್ನ ಮನೆಯ ಬಾಗಿಲಲ್ಲಿ ನಿಂತಿದ್ದಾನೆ. ಸ್ವಾಮಿ ಬರುತ್ತಿರುವುದನ್ನೇ ನೋಡುತ್ತಿದ್ದಾನೆ. ಆ ಪುಣ್ಯಾತ್ಮನಿಗೆ ಕೃಷ್ಣ ಹೇಗೆ ಕಾಣಿಸುತ್ತಿದ್ದಾನೆ?

ಸಿರಿಮೊಗದ, ಕಿರುಬೆಮರ, ತೇಜಿಯ
ಖುರಪುಟದ ಕೆಂಧೂಳಿ ಸೋಂಕಿದ ಸಿರಿಮುಡಿಯ
ಕುಡಿಮೀಸೆಯಲಿ ಕೆಂಪಡರ್ದ ರೇಣುಗಳ

ವಿದುರನ ಮನೆಯಿಂದ ಕುರುರಾಜನರಮನೆಗೆ ಬಿಜಯ ಮಾಡಿಸುತ್ತಿರುವ ಕೃಷ್ಣನ ವರ್ಣನೆ ಮಾಡುವಾಗ ಕವಿ ಭಾಮಿನೀಷಟ್ಪದಿಗಳ ಮಾಲೆಯನ್ನೇ ತಯಾರು ಮಾಡಿದ್ದಾನೆ. ಅಪ್ರಯತ್ನವಾಗ್ಧಾರೆ ಮಂಗಳ ಮಂದಾಕಿನಿಯಂತೆ ಪ್ರವಹಿಸಿದೆ.

ಕಂಜ ಸಂಭವ ಪಿತನು ಬಂದನು
ನಂಜಿನಲಿ ಪವಡಿಸುವ ಬಂದನು
ಕುಂಜರನ ಮೊರೆಗೇಳಿ ಸಲಹಿದ ದೇವ ತಾ ಬಂದ
ಅಂಜಿದಸುರನ ಕಾಯ್ದ ಬಂದನು
ಭಂಜನೆಗೆ ಬಲು ದೈವ ಬಂದ ಧ
ನಂಜಯಾದ್ಯರ ಭಾವ ಬಂದನು ನೃಪತಿಯೋಲಗಕೆ

ದೇವ ಬಂದನು ತನ್ನ ನೆನೆವರ
ಕಾವ ಬಂದನು ದೈತ್ಯ ಕುಲವನ
ದಾವ ಬಂದನು ಭಾಗವತ ಜನ ಲೋಲುಪನು ಬಂದ
ಭಾವಿಸುವೊಡಘಹಾರಿ ಬಂದನು
ಓವಿ ಬಂದರೆ ತನ್ನ ಬೀರುವ
ದೇವ ಬಂದನು ವೀರ ನರಯಣ ಬಂದ ನರಮನೆಗೆ

ಅರಸ ಬಂದನು ಭಾಗವತಜನ
ಪರುಷ ಬಂದನು ಭಕ್ತ ವತ್ಸಲ
ಕರುಣಿ ಬಂದನು ತನ್ನ ನೆನೆದರೆ ಪರಮಪದವೀವ
ಪರಮ ಪುರುಷೋತ್ತಮನು ಬಂದನು
ದುರಿತ ದುರ್ಗ ವಿಭಾಡ ಬಂದನು
ಸುರರ ಸಲಹುವ ದೇವ ಬಂದನು ನೃಪತಿಯರಮನೆಗೆ

ಕ್ಷೀರವಾರಿಧಿ ಶಯನ ಬಂದನು
ವಾರಿಜೋದರ ಕೃಷ್ಣ ಬಂದನು
ಧಾರುಣಿಯ ಹೊರೆಗಳೆಯ ಲೋಸುಗ ಮನುಜವೇಶದಲಿ
ಭೂರಿ ದನುಜರನೊರೆಸಿ ಕೌರವ
ವಾರಿಧಿಯ ಮುಕ್ಕುಳಿಸಲೆಂದೇ
ಭೋರನೈತರುತಿರ್ದನಂಥ ನೃಪಾಲನೋಲಗಕೆ

ಖರೆ ಮರೀಚಿಯು ಝಳಕೆ ಬಾಡಿದ
ತರುಣ ತುಲಸಿಯದಂಡೆ ಯೊಪ್ಪುವ

—ಆ ಶೃಂಗಾರ ಮೂರುತಿಯ ಅಂದ ಚಂದಗಳನ್ನು ಕಂಡು ವಿದುರ ಧನ್ಯನಾದ—ಬೆರಗಾದ—ಮೈಮರೆತ. ಸನಕಾದಿ ಪೂಜ್ಯರಿಗೂ ಅಲಭ್ಯವಾದ ಕೃಪಾಮೂರ್ತಿಯ ಪಾದದರ್ಶನ ಭಾಗ್ಯವದೇಸು ಜನ್ಮದ ಸುಕೃತವೋ—ಎಂದು ಹಿಗ್ಗಿಹೋದ—ವೇದೋಪನಿಷತ್ ಪ್ರತಿಪಾದ್ಯವಸ್ತು ನಡೆದು ಬರುತ್ತಿದೆ!! ನೋಡಿದನು ಮನದಣಿಯೆ, ಕಂಡು ಕುಣಿದಾಡಿದನು, ನಾರಾಯಣನ ಪದದರ್ಶನದ ಹರುಷಾರಣ್ಯದಲಿ ಮನ ಹೊಲಬುದಪ್ಪಿದನು.

ವಿದುರ ತನ್ನ ಮನೆಗೆ ಬಿಜಯ ಮಾಡಿಸಿದ ಪರಮಪುರುಷೋತ್ತಮನಿಗೆ ಮಾಡಿದ ಉಪಚಾರವೇನು? ಕವಿ ಹೇಳುತ್ತಾನೆ – "ಪಾಲ್ಗಡಲೊಳಗೆ ಮಲಗುವ ವಿಷ್ಣು, ವಿದುರನ ನಿಳಯದೊಳಗೊಕ್ಕುಡಿತೆ ಹಾಲಲಿ ಹಸಿವ ನೂಕಿಸನು''. ವಿದುರ ಸಮರ್ಪಿಸಿದ ಹಾಲು ಕುಡಿದು ಸ್ವಾಮಿ ತೃಪ್ತನಾದನಂತೆ!! ಆತ ಕೊಟ್ಟ ವಸ್ತುವೇನೇ ಆಗಿರಲಿ—ಎಷ್ಟೇ ಆಗಿರಲಿ—ಕೃಷ್ಣಾರ್ಪಿತವಾಗಲೆಂಬ ಭಾವನೆ ಇಲ್ಲಿ ಗಮನಾರ್ಹವಾದ ಸಂಗತಿ.

ಪತ್ರಂ ಪುಷ್ಪಂ ಫಲಂ ತೋಯಂ
ಯೋ ಮೇ ಭಕ್ತ್ಯಾ ಪ್ರಯಚ್ಛತಿ
ತದಹಂ ಭಕ್ತ್ಯುಪಹೃತ
ಮಶ್ನಾಮಿ ಪ್ರಯತಾತ್ಮನಃ

(ಗೀತೆ. 9–26.) ಈ ಶ್ಲೋಕಕ್ಕೆ ಬರೆದ ವಾರ್ತಿಕದಂತಿದೆ. ವಿದುರ ನೀಡಿದ ಆದರದ ಆತಿಥ್ಯ!!

ಅಮಿತಕರುಣಾಸಿಂಧುವಿನ ಪದಕಮಲದಲಿ ವಿದುರನೊಂದು ಭೃಂಗ!! ಕೃಷ್ಣ, ಕುಂತಿದೇವಿಗೆ ಪಾಂಡವರ ಕ್ಷೇಮವಾರ್ತೆಯನ್ನೆಲ್ಲ ತಿಳಿಸಿ, ಅವರಿಗೆ ಅರ್ಧ ರಾಜ್ಯವನ್ನು ಕೊಡಿಸುವ ಸಲುವಾಗಿ ಬಂದಿರುವುದಾಗಿ ಹೇಳಿದಾಗ, ಕೃಷ್ಣನ ವರಸುಧಾಮಯ ವಚವನು ಕೇಳಿದ ಆಕೆಗೆ ಭಾವೋದ್ವೇಗದಿಂದ ಕಣ್ಣಲ್ಲಿ ನೀರು ಬಂತು.

ವರದಮೂರುತಿ ಕೃಷ್ಣ ವಿದುರನ ಮನೆಯಲ್ಲಿ ಕ್ಷೀರಪಾನ ಮಾಡಿದನೆಂದು ಬರೆದರೆ ಭಕ್ತಕವಿ ಕುಮಾರವ್ಯಾಸನಿಗೆ ತೃಪ್ತಿಯಿಲ್ಲ. ಅದರ ಪರಿಣಾಮವೇನಾಯ್ತು? ಇದು ಆತನ ಗಮನ ಸೆಳೆದಿರುವ ಪ್ರಶ್ನೆ. ಕೌರವನರಮನೆಯು ಒಳಗಂಭದವರೆಗೂ ಹಾಲಿನ ಪ್ರವಾಹವೇ ನುಗ್ಗಿಬಂತು. ಮುರಹರನೊಡನೆ ಹಾಲಿನ ಶರಧಿ ಉಕ್ಕೇರಿ ಹರಿಯಿತೇ! ಇದೇನಚ್ಚರಿಯೆಂದು ಭೀಷ್ಮಾದಿಗಳು ಬೆರಗಾದರು – ಸ್ವಾಮಿಯ ಮಹಿಮೆಯನ್ನು ಕೊಂಡಾಡಿ ಧನ್ಯರಾದರು.

ಸುಯೋಧನ ಎಷ್ಟಾದರೂ ಸಾಮ್ರಾಟ. ಸರ್ವಾಧಿಕಾರ ಕೈಲಿದ್ದ ಛಲಪಂಕಮಲ್ಲ. ಆತನನ್ನು ಕಾಣುವುದು—ಕಂಡು ಮಾತಾಡುವುದು—ಎಲ್ಲರಿಕ್ಕೂ ನಿಗದಿಯಾದ ಸಮಯವಿದೆ. ಅದಕ್ಕೆ ಪೂರ್ವಾನುಮತಿ ಅತ್ಯಗತ್ಯ. ಸಿರಿಲೋಲ ಬಿಜಯಂಗೈಯಲವಸರವುಂಟೆ? ಎಂದು ವಿದುರ ಕೇಳಿದಾಗ—ಆತ ಗತ್ತಿನಿಂದ ಹೇಳಿದ—ನಾಳೆ ಬರಹೇಳು. ಕೌರವೇಶ್ವರನ ಠೀವಿಯೇ ಠೀವಿ!! ವಿದುರ ಮರು ಮಾತಾಡಲಿಲ್ಲ. ವಿಚಾರವನ್ನು ಕೃಷ್ಣನಿಗೆ ಬಿನ್ನವಿಸಿದ. ಮುಕುಂದ ಮುಗುಳ್ನಗೆ ನಕ್ಕ.

ಶ್ರೀಕೃಷ್ಣ, ಸಂಧಿ ಪ್ರಸ್ತಾಪಕ್ಕಾಗಿ ಕೌರವೇಶ್ವರನರಮನೆಗೆ ಬರುತ್ತಾನೆಂದರೆ, ತನ್ನ ರಾಜಗಾಂಭೀರ್ಯ ವೈಭವಗಳ ಪ್ರದರ್ಶನಕ್ಕೆ ಅವಕಾಶ ಸಿಕ್ಕಿತೆಂದೇ ಭಾವಿಸಿದ ದುರ್ಯೋಧನ, ಆತನ ಸ್ವಾಗತಕ್ಕಾಗಿ ಮಹೋನ್ನತವಾದ ಏರ್ಪಾಟು ಮಾಡಿದ. ಸಾಮಂತ ನೃಪಾಲರ, ಮಾಂಡಲಿಕ ಮನ್ನೆಯರ ಗುಂಪು, ಸಭಾಭವನದಲ್ಲಿ – ಒಂದು ನಿರ್ದಿಷ್ಟ ಪ್ರದೇಶದಲ್ಲಿ—ಕುಳಿತಿರತಕ್ಕದ್ದು, ಮಿತ್ರರು—ಯುದ್ಧವಿದ್ಯಾ ಪ್ರವೀಣರು ತಂತಮ್ಮ ಸ್ಥಳಗಳಲ್ಲಾಸೀನರಾಗಿರಲಿ, ಸಭೆಯಲ್ಲಿ ಸಮುನ್ನತ ರತ್ನ ಸಿಂಹಾಸನದ ಮೇಲೆ ಧೃತರಾಷ್ಟ್ರ ನೃಪಾಲ ಆತನ ಬಲಭಾಗಕ್ಕೆ ಪಿತಾಮಹ ಭೀಷ್ಮ—ಆಚಾರ್ಯ ದ್ರೋಣ-ಗುರುಪುತ್ರ ಅಶ್ವತ್ಥಾಮ—ಮತ್ತು ವಿದುರ, ಎಡಭಾಗದಲ್ಲಿ ಕರ್ಣ—ಜಯದ್ರಥ ಅವರ ಮುಂದೆ ಶಕುನಿ, ಆತನ ಪಕ್ಕದಲ್ಲಿ ಸುಯೋಧನ—ದುಃಶಾಸನ. ಈ ಕಡೆಗೆ ಸಭೆಯ ಪಂಡಿತರು—ಸಕಲ ಕಲಾಮಂಡಿತರು. ಅವರ ಬದಿಗೆ ಋಷಿಸಮೂಹಕ್ಕೆ ಮೀಸಲಾದ ಭದ್ರಾಸನಗಳು. ಈ ಕಡೆಗೆ ಬಾಹ್ಲೀಕ ಭೂರಿಶ್ರವ—ವೃಷಸೇನ. ಅವರಿಗೆದುರಾಗಿ ಕೌರವೇಂದ್ರನ ಅನುಜಸಮೂಹ. ಸಭಾಮಧ್ಯದಲ್ಲಿ ನಿಂತು ಮಾತಾಡುವ ಕೃಷ್ಣನಿಗಾಗಿ ಮಣಿಖಚಿತ ಕಾಂಚನ ಕೇಸರಿಪೀಠ. ಆತನೊಡನೆ ಬರುವ ಸಿಬ್ಬಂದಿಗೆ ಸೂಕ್ತವ್ಯವಸ್ಥೆ. 'ಕಲಹವಿಲ್ಲದೆ ನೂರಿನೆಳೆಯಲಿ ತಲೆಯನರಿವ, ವಿರೋಧಿರಾಯರನಳುಕಿಸುವ, ಸಾಮದಲಿ ಗೆಲುವ, ಒಳಲಂಚದಲಿ ಛಿದ್ರಿಸಿ ಕೊಲುವ ಮುನಿದೊಡೆ ಮಂತ್ರಶಕ್ತಿಯೊಳಳುಕಿಸುವ ಮಂತ್ರಿಸಮೂಹವು' ಆಕಡೆ, ನರೇಂದ್ರನ ಹಿಂಭಾಗದಲ್ಲಿ ಮಂಡಿಸಿದೆ. ಜವನ ದಾಡೆಯ ತುಡುಕುವ, ಸಿಕ್ಕಿದೈರಾವತನ ಕೆಡವಿಡಿದೆಳೆವ ಸಾಹಸದ ಪಟುಭಟರ ಸಮೂಹ, ಕೌರವೇಂದ್ರನ ಕಣ್ಸನ್ನೆ ಸುಸ್ಪಷ್ಟವಾಗಿ ಕಾಣುವಂತೆ ಆಕಡೆ ಸನ್ನದ್ಧವಾಗಿ ನಿಂತಿದೆ. ದುರ್ಯೋಧನನ ಹಿಂಭಾಗದಲ್ಲಿ ರಾಯಭಾರಿಗಳ ಸಮೂಹ—ಸಭಾಭವನ ದಿವ್ಯಾಲಂಕೃತವಾಗಿದೆ. ಕತ್ತುರಿಯ ಪರಿಮಳ—ಪುನುಗು ಜವಾಜಿಗಳ ಪರಿಮಳ—ಅಮರಸಭೆಯನ್ನು ನೆನಪಿಗೆ ತರುವಂತಿದೆ, ಝಗಝಗಿಸುವ ರತ್ನಾಭರಣ ಭೂಷಿತರಾದ ಅಂತಃಪುರದ ನಾರಿಯರು—ಮೇಲುಪ್ಪರಿಗೆಯಲ್ಲಿ. ಸಿಂಹಪೀಠಗಳ ಇಕ್ಕೆಲಗಳಲ್ಲಿ ಚೆಲುವಿನ ಬಿಂಕದ ಸಿಂಗಾರಿಯರು ಚಾಮರ ಹಿಡಿದು ನಿಂತಿದ್ದಾರೆ. ಭವನದಲ್ಲಿ ಹಾಸಿದ ರತ್ನಗಂಬಳಿ ಕೌರವನ ಸಿರಿಸಂಪತ್ತಿನ ಮುಂದೆ—ಯಾರದೇನು—ಎಂಬ ಠೀವಿಯಿಂದ ನಗುವಂತಿದೆ ಕಿವಿಗಿಂಪಾದ ನಯವಾದ, ಮಧುರವಾದ – ಚೇತೋಹಾರಿಯಾದ – ಮಂಗಳವಾದ್ಯಗಳು ಗಂಭೀರನಾದ ಬೀರುತ್ತಿವೆ. ದಿವಿಜಸಭೆಯನ್ನು ತಿರಸ್ಕರಿಸುವಂತೆ ವೈಭವದಿ ಓಲಾಡುತ್ತಿರುವ ಕುರುಪತಿಯ ಸಭಾಭವನ, ಕೃಷ್ಣನ ಸ್ವಾಗತಕ್ಕೆ ಪೂರ್ಣ ಸಜ್ಜಾಗಿ ಮೆರೆಯುತ್ತಿತ್ತು, ಹೆಜ್ಜೆಹೆಜ್ಜೆಗೂ ರಾಜ ಗಾಂಭೀರ್ಯವೆದ್ದು ಕಾಣುವಂತೆ.

ಭಕ್ತಕವಿ ಕುಮಾರವ್ಯಾಸನಿಗೆ ಕಾವ್ಯಬೋಧಕ ಶಕ್ತಿಯೇ ಕೃಷ್ಣ. ಶ್ರವಣಸುಧಾಪಿನೂತನ, ಕಥನಕಾರಣ—ಈ ಮಹಿಮಾನ್ವಿತ ಮಹೋನ್ನತಪಾತ್ರವನ್ನು ಕಾವ್ಯರಂಗದ ಮೇಲೆ ತರುವಾಗ ಕವಿಗೆ ಅದೇನು ಉತ್ಸಾಹವೋ!! ಅದೆಷ್ಟು ಸಂಭ್ರಮವೋ!! ವರಕಾಂಚನ ವರೂಥಕೆ ಕೈಗೊಡುವ ಯದುಜನಪರುಗ್ಗಡಣೆಯಲಿ ಹೊರಟನಂತೆ ಕೃಷ್ಣ. ಕೌರವೇಶ್ವರನರಮನೆಗೆ ರಾಜಮಾರ್ಗದಲ್ಲಿ ಆತ ಬರುವಾಗ ಲಕ್ಷಲಕ್ಷಜನ ದರ್ಶನಭಾಗ್ಯಪಡೆದರು. ಪರಮ ಮಂಗಳದಮಲ ಮೂರುತಿಯ ಪುಣ್ಯರೂಪವನ್ನು ಕಂಡು ಹಸ್ತಿನೆಯ ಜನ ಕೃತಾರ್ಥರಾದರು.

———

# ಪ್ರಕಟನೆ

ತಿರುಮಲೆ ತಿರುಪತಿ ದೇವಸ್ಥಾನಗಳವರು, ತಿರುಮಲೆಗೆ ಹೋಗುವ ಘಾಟ್ ರಸ್ತೆಯಲ್ಲಿ ಕೆಟ್ಟುನಿಂತವಾಹನಗಳ ಅಗತ್ಯ ದುರಸ್ತಿಗಾಗಿ, ಸರಸವಾದ ದರಗಳಲ್ಲಿ ಕೆಲಸಮಾಡುವ ಒಂದು ಸಂಚಾರೀ ದುರಸ್ತಿ ವಾಹನವನ್ನು ಏರ್ಪಾಡು ಮಾಡಿರುತ್ತಾರೆ. ಈ ವಾಹನವು ಎಲ್ಲ ದಿನಗಳಲ್ಲೂ ಬೆಳಗ್ಗೆ 9 ಗಂಟೆಯಿಂದ ಸಂಜೆ 6 ಗಂಟೆಯವರೆಗೆ, ತಿರುಪತಿಯ ಅಲಿಪಿರಿ ಟೋಲ್ ಗೇಟಿನಲ್ಲಿಯಾಗಲೀ ಅಥವಾ ತಿರುಮಲೆಯ ಟೋಲ್‌ಗೇಟಿನಲ್ಲಿಯಾಗಲೀ ದೊರೆಯುವಂತೆ ಏರ್ಪಾಡು ಮಾಡಲಾಗಿದೆ. ಹಾಗಾಗಿ ತಮ್ಮ ವಾಹನಗಳನ್ನು ದುರಸ್ತಿ ಮಾಡಿಸಿಕೊಳ್ಳ ಬಯಸುವವರು ಮೇಲ್ಕಂಡ ಟೋಲ್‌ಗೇಟ್‌ಗಳಲ್ಲಿನ ಸಿಬ್ಬಂದಿಯನ್ನು ವಿಚಾರಿಸಿ ಈ ಸೇವಾಸದುಪಾಯದ ಅನುಕೂಲ ಪಡೆಯಬಹುದು.

—ತಿ. ತಿ. ದೇ.

# ವಿಶ್ವವ್ಯಾಪಕ ಗಣಪತಿ

ಇದೀ ಭರತ ಖಂಡದಲ್ಲಿ ಆಚರಣೆಯಲ್ಲಿಟ್ಟು ಕೊಂಡು ಭಕ್ತಿಯಿಂದ ಸೇವಾಕೈಂಕರ್ಯಾದಿಗಳನ್ನು ನಡೆಸಿಕೊಂಡು ಬರುತ್ತಿರುವ ಉತ್ಸವಾದಿಗಳಲ್ಲಿ ಶ್ರೀ ಗಣಪತಿಯ ಮಹೋತ್ಸವವು ಬಹು ಪ್ರಸಿದ್ಧಿಗೆ ಬಂದಿರುವ ವಿಚಾರ ಸಕಲರಿಗೂ ವೇದ್ಯವಾಗಿದೆ. ಈ ಜಗತ್ತಿನ ಯಾವ ಭಾಗದಲ್ಲೇ ಇರಲಿ, ಸಕಲ ಭಾರತೀಯರೂ ಕಡ್ಡಾಯವಾಗಿ ಶ್ರೀಗಣಪತಿಯನ್ನು ಪೂಜಿಸುತ್ತಲಿರುತ್ತಾರೆ. ಭರತಖಂಡದ ಆಸ್ತಿಕರನ್ನು ಮುಖ್ಯವಾಗಿ ನಾಲ್ಕು ಗುಂಪಾಗಿ ವಿಂಗಡಿಸಬಹುದಾಗಿದೆ. 1. ವಿಷ್ಣುವಿನ ಆರಾಧಕರು 2. ಶೈವಾರಾಧಕರು 3. ಶಕ್ತಿ ಆರಾಧಕರು 4. ನಿರ್ಗುಣೋಪಾಸಕರು. ಇವರಲ್ಲಿ ಕೆಲವರು ವೇದಪ್ರಾಮಾಣ್ಯವನ್ನೊಪ್ಪುವವರು, ಕೆಲವರು ಒಪ್ಪರು. ಇಷ್ಟೆಲ್ಲಾ ನಾನಾ ತೆರನಾದ ಆಸ್ತಿಕ ಪ್ರಭೇದಗಳಿದ್ದರೂ ಪ್ರತಿ ಒಬ್ಬರೂ ಯಾವ ಮತಗಳನ್ನೇ ಅನುಸರಿಸಲಿ ಇಂದಿನ, ಕಥಾನಾಯಕನಾದ ನಮ್ಮ ಗಣಪತಿಯನ್ನು ಸ್ವಪ್ರೇರಣೆಯಿಂದ ಆರಾಧಿಸುತ್ತಿರುವುದು ಅತ್ಯಂತ ಅಚ್ಚರಿಯ ಸಂಗತಿ.

ಹಿಂದೆ ನೈಮಿಶಾರಣ್ಯದಲ್ಲಿ ಮಹರ್ಷಿಗಳು ಮಾಡುತ್ತಿದ್ದ ಸಾತ್ವಿಕ ಕರ್ಮಗಳಿಗೆ ಅಡ್ಡಿ ಬರಲು ಸೂತರು ಭಾದ್ರಪದಮಾಸದ ಶುಕ್ಲಪಕ್ಷದ ಚತುರ್ಥೀ ದಿನದಲ್ಲಿ ಈ ಗಣಪತಿಯನ್ನು ಆರಾಧಿಸಿದರೆ ಎಲ್ಲಾ ಕಾರ್ಯಗಳೂ ಸುಗಮವಾಗಿ ನಡೆಯುವುವೆಂದು ತಿಳಿಸಿದರು. ಇದನ್ನು ಶ್ರೀ ವಾದಿರಾಜ ಯತಿಸಾರ್ವಭೌಮರು ಈ ರೀತಿ ತಿಳಿಸಿರುತ್ತಾರೆ –

ದುಷ್ಟಾನಾಂ ವಿಘ್ನಕರ್ತಾ ಸುಚರಿತ
ಸುಜನ ಸ್ತೋಮ ವಿಘ್ನಾಪಹರ್ತಾ।
ತಸ್ಮಾದ್ವಿಘ್ನಾಧಿಪೋಽಹಂ ಮಮ ಇತಿ
ಸುಧಿಯಾಂ ಸ್ಪಷ್ಟಮಾಜ್ಞಾಪನಾಯಾ॥

ಸುಜನರಿಗೆ ಸದಾ ಅನುಕೂಲವಾಗಿ ದುಷ್ಟರಿಗೆ ವಿಘ್ನಕಾರಿಯಾಗಿ ಇದ್ದು ತನ್ಮುಖಾಂತರ ಭಗವದಾರಾಧನ ಮಾಡಿಸುವ ಮುಖ್ಯಸೂತ್ರಧಾರಿಯು ನಮ್ಮ ಶ್ರೀ ಗಣಪತಿ.

ಪಾರ್ವತಿಯು ಪೃಥ್ವೀ ತತ್ವಕ್ಕೆ ಅಭಿಮಾನಿ ದೇವತೆಯಾದ ಕಾರಣ ಮೃತ್ತಿಕೆಯಿಂದ ಒಂದು ಗಣಪತಿ ವಿಗ್ರಹವನ್ನು ತಯಾರಿಸಿ ಅದಕ್ಕೆ ಜೀವಕಳೆಯನ್ನಿತ್ತಳೆಂದು ತಿಳಿಯತಕ್ಕದ್ದು. ಆಕೆಯ ಮೈಕೊಳೆಯಿಂದ ಎಂದು ಭಾವಿಸಲಾಗದು. ಪರಮಾತ್ಮನ ವಿರಾಟ್‌ರೂಪದಲ್ಲಿ ಗಣಪತಿಮುಖದ ರೂಪವನ್ನು ಈತ ಉಪಾಸನೆ ಮಾಡಿದಕಾರಣ ಅದೇ ರೂಪ ಹೊಂದಿರುವನು. ಇನ್ನೊಂದು ಅರ್ಥ ಗಜಮುಖ ಬುದ್ಧಿ ಸೂಚಕರೂಪವಾದ ಕಾರಣ ಈತ ವಿದ್ಯಾಗಣಪತಿ ಎಂತಲೇ ಗಜಮುಖವನ್ನು ಹೊಂದಿರುವನು ಎಂದರಿಯಬೇಕು. ಬಲೀ ಕಾಮಕ್ರೋಧವನ್ನೇ ಮನುಜ ತನ್ನುದರದಲ್ಲಿ ಹೊಂದಿರುವನೆಂಬ ಭಾವಸೂಚಕರೂಪ ಈತನ ಹೊಟ್ಟೆಗೆ ಹಾವು ಸುತ್ತಿರುವುದು.

ಮನುಷ್ಯನ ಜೀವನಾಧಾರವಾದ ದವಸ ಧಾನ್ಯಾದಿಗಳನ್ನು ಚಿಕ್ಕ ಆಕಾರದ ಇಲಿಯು ತಿಂದು ಜೊಳ್ಳು ಮಾಡುವಂತೆ ನಮ್ಮ ಆಯಸ್ಸನ್ನು



ಕಾಲನು ತಿನ್ನುತ್ತಿರುತ್ತಾನೆ. ಅಂತಹ ಮೃತ್ಯುವನ್ನೇ ನಿಗ್ರಹಿಸಿ ಈತ ಮೆಟ್ಟಿ ಕೂತಿರುವನೆಂಬ ಭವನಾ ಸೂಚಕವಾಗಿ ಈತನಿಗೆ ಇಲಿವಾಹನವನ್ನು ತೋರಿಸಲಾಗಿದೆ. ಸಾಲದುದಕ್ಕೆ ಈತ ಮೂಷಕನಾಮಕ ದೈತ್ಯಸಂಹಾರಿ ಎಂಬುದು ಮತ್ತೊಂದರ್ಥ.

ಒಮ್ಮೆ ವೇದವ್ಯಾಸರು ಗಣಪತಿಗೆ ತಾವು ಹೇಳಬೇಕೆಂದಿರುವ ವೇದ ವಿಭಾಗ ವಿಚಾರ, ಶ್ರೀ ಬ್ರಹ್ಮಸೂತ್ರರಚನಾ, ಹಾಗೂ ಅಷ್ಟಾದಶ ಪುರಾಣಾದಿಗಳನ್ನು ಬರೆಯಲು ಗಣಪತಿಗೆ ಆಜ್ಞಾಪಿಸಲು, ಆತ ತನ್ನ ಕೈ ನಿಲ್ಲದೇ ಬರೆಯುತ್ತಿರುವ ಪರಿಯಲ್ಲಿ ಹೇಳುತ್ತಲೇ ಇರಬೇಕೆಂದು ಯಾಚಿಸಿದ. ಆಗ ಮಹಾನುಭಾವರಾದ ವೇದವ್ಯಾಸರು ತಾವು ಹೇಳಿದ್ದನ್ನು ಅರ್ಥಮಾಡಿಕೊಂಡು ಬರೆಯಬೇಕೆಂದು ಕರಾರು ಮಾಡಿಕೊಂಡರು. ಆದ್ದರಿಂದ ನಮ್ಮ ಗಣಪತಿಯು ವೇದ, ಶಾಸ್ತ್ರ, ಪುರಾಣಾದಿಗಳನ್ನೆಲ್ಲಾ ಅರಿತವನೆಂದಾಯಿತು. ಜೊತೆಗೆ ನೈಷ್ಠಿಕ ಬ್ರಹ್ಮಚರ್ಯಾಶ್ರಮದಲ್ಲಿರುವವನು. ಇದನ್ನು ಕನಕದಾಸರು "ರಾಶಿವಿದ್ಯೆಯ ಬಲ್ಲ ರಮಣೀ ಹಂಬಲ ನೊಲ್ಲ" ಎಂಬುದಾಗಿಯೂ ಜಗನ್ನಾಥದಾಸರು ತಮ್ಮ ಹರಿಕಥಾಮೃತಸಾರ ಗ್ರಂಥದಲ್ಲಿ "ವ್ಯಾಸಕೃತ ಗ್ರಂಥಗಳ ಪ್ರಯಾಸವಿಲ್ಲದೇ ವಿಸ್ತರಿಸಿದೆಯೋ ಲೋಕದೊಳು" ಎಂದೂ ನಿರೂಪಿಸಿರುತ್ತಾರೆ.

ಈ ಗಣಪತಿಯು ಪ್ರಾಣಾವೇಶ ಯುಕ್ತನಾಗಿ ಕುಬೇರ, ಅಶ್ವಿನೀದೇವತೆಗಳಿಗೆ ಸಮವಾಗಿ ಶೇಷ ಶತಸ್ಥರೆಂಬ 85 ಜನ ದೇವತೆಗಳಿಗೂ ಹಾಗೂ ಗಂಗಾದೇವಿಗೂ ಹೆಚ್ಚಿನ ಸ್ಥಾನಮಾನದಲ್ಲಿ ಪೂಜಿತನಾಗಿರುವುದೂ ಅಲ್ಲದೇ ದ್ವಾಪರದಲ್ಲಿ ರುಕ್ಮಿಣೀದೇವಿಯಲ್ಲಿ "ಚಾರುದೇಷ್ಣ" ಎಂಬ ಹೆಸರಿನಿಂದ ಮಗನಾಗಿ ಜನಿಸಿದ ವಿಚಾರವು ಹರಿಕಥಾಮೃತಸಾರದಲ್ಲಿ ನಿರೂಪಿತವಾಗಿದೆ.

ಹರಿಕಥಾಮೃತಸಾರದ ವಿಘ್ನೇಶ್ವರ ಸ್ತೋತ್ರ ಸಂಧಿಯ ಹನ್ನೆರಡನೆಯ ಪದ್ಯದಲ್ಲಿ ಹೀಗೆ ಹೇಳಲಾಗಿದೆ–

ಶುಕ್ರಶಿಷ್ಯರ ಸಂಹರಿಪುದಕೆ
ಶಕ್ರ ನಿನ್ನನು ಪೂಜಿಸಿದನು ಉ
ರುಕ್ರಮ ಶ್ರೀರಾಮಚಂದ್ರನು
ಸೇತು ಮುಖದಲ್ಲಿ॥
ಚಕ್ರವರ್ತಿಪ ಧರ್ಮರಾಜನು
ಚಕ್ರಪಾಣಿಯ ನುಡಿಗೆ ಭಜಿಸಿದ
ನಕ್ರತುಂಡನೆ ನಿನ್ನೊಳೆಂತುಂಟೀಶ
ನನುಗ್ರಹವು॥

ಹಿಂದೆ ಅಗಸ್ತ್ಯಮಹಾಮುನಿಗಳು ಒಂದು ವಿಚಿತ್ರಕಳಶವನ್ನು ಹೊಂದಿ ಅದರಿಂದ ನಿತ್ಯ ಕಾಶೀರಾಮೇಶ್ವರಯಾತ್ರೆ ಮಾಡುತ್ತಲಿದ್ದರು.

ಶ್ರೀ ಚಿ. ಪ್ರಹ್ಲಾದಾಚಾರ್ಯ

## ಗಣಪತಿಯ ವಿವಿಧ ರೂಪಗಳು

(ಏಕ ವಿಂಶತಿ ರೂಪಗಳು)

1) ವೀರಗಣಪತಿ :– ಬೇತಾಳ, ಶಕ್ತಿ, ಧನುರ್ಭಾಣ, ಖಡ್ಗ, ಮುದ್ಗರ, ಗದಾ, ಅಂಕುಶ, ನಾಗಪಾಶ, ಶೂಲ, ಪರಶು, ಧ್ವಜಾದಿಗಳನ್ನು ಹೊಂದಿದ 12 ಕೈಗಳುಳ್ಳ ಮೂರ್ತಿ.

2) ಉಚ್ಛಿಷ್ಠ ಗಣಪತಿ:– ಎಕ್ಕದ ಬೇರಿನದು-ವಿಪತ್ಕಾರ್ಯಕ್ಕೆ ಪೂಜಿಸಲ್ಪಡುವನು.

3) ಸಂಪ್ರದೀಯಗಣಪತಿ: ಕುಂಭ ಪಾಶಾದಿ ಹಿಡಿದ 6 ಕೈಗಳುಳ್ಳ ಮೂರ್ತಿ

4) ಭುವನ ಗಣಪತಿ :– ಕೊಡಲಿ, ತಾವರೆ, ಕಬ್ಬಿನಜಲ್ಲೆ ಹಿಡಿದ ಮೂರ್ತಿ

5) ಮಹಾಗಣಪತಿ :– ಕಲ್ಹಾರಾದಿ ಧರಿಸಿದ ಸುಂದರ ಮೂರ್ತಿ

6) ಲಕ್ಷ್ಮೀಗಣಪತಿ :– ಕುಂಭಾದಿ ಧರಿಸಿದ ಐಶ್ವರ್ಯಪ್ರದ ಮೂರ್ತಿ

7) ಕರುಣಗಣಪತಿ :– ಪಾಶ, ಅಂಕುಶ, ಮೋದಕಾದಿ ಧರಿಸಿದ ಮೂರ್ತಿ

8) ಭಕ್ತಿಗಣಪತಿ :– ತೆಂಗಿನಕಾಯಿ, ಮಾವು ಧರಿಸಿದ ಮೂರ್ತಿ

9) ಚತುರ್ಥಿಗಣಪತಿ: ಗದಾ ಪಾಶಾದಿಗಳನ್ನು ಧರಿಸಿದ ಮೂರ್ತಿ

10) ಪಿಂಗಳ ಗಣಪತಿ : ಮಾವು ಧರಿಸಿದ, ಹಳದಿ ವಸ್ತ್ರ ಧರಿಸಿದ ಮೂರ್ತಿ

11) ದ್ವಿಜಗಣಪತಿ :– ಪುಸ್ತಕ, ದಂಡ, ಧರಿಸಿದ ಮೂರ್ತಿ

12) ಬಾಲಗಣಪತಿ :– ಬಾಳೆ,ಮಾವು ಧರಿಸಿದ ಬಾಲರೂಪಿ

13) ಊರ್ಧ್ವಗಣಪತಿ : ಕಲ್ಹಾರ, ಮುಸುಕಿನ ಜೋಳ ಧರಿಸಿದ ಮೂರ್ತಿ

14) ಹೇರಂಬ ಗಣಪತಿ : ಪಂಚಮುಖದ, ಸಿಂಹಾಸನಾ, ಅಕ್ಷಯಮಾಲಾ, ಪರಶು ಹಿಡಿದ ಮೂರ್ತಿ.

15) ಪಲ್ಲವ ಗಣಪತಿ :– ಪದ್ಮಾಸನಸ್ಥ ದಾಳಿಂಬೆ ಹಿಡಿದ ಮೂರ್ತಿ

16) ಸಿದ್ಧಿ ಬುದ್ಧಿ ಗಣಪತಿ:– ಸಿದ್ಧಿ ಬದ್ಧಿ ಯಿಂದ ಇಂದ ಕೂಡಿದ ತ್ರಿಶೂಲ, ಗದಾಪಾಣಿ ಮೂರ್ತಿ

17) ಸ್ಕಂದಪ್ರಿಯ ಗಣಪತಿ :– ಕುಮಾರಸ್ವಾಮಿ ಒಡಗೂಡಿದ ಬಾಲರೂಪಿ

18) ಆದಿಗಣಪತಿ :– ಸರ್ಪಭೂಷಣ, ಪಾಶಾಂಕುಶಪಾಣಿ ಮೂರ್ತಿ

19) ನರ್ತನಗಣಪತಿ :– ನಾಗಪಾಶಹಿಡಿದ ನಾಟ್ಯಭಂಗಿಯ ಮೂರ್ತಿ

20) ಪಿಳ್ಳೇರಾಯ ಗಣಪತಿ :– ಗರಿಕೆಹುಲ್ಲು ಸೆಗಣಿಯಿಂದಾದ ಮೂರ್ತಿ

21) ಜ್ಞಾನರೂಪಿ ಗಣಪತಿ :– ಭಾರತಾದಿ ಗ್ರಂಥ ಬರೆದ ಅದೇ ರೂಪದ ಮೂರ್ತಿ ಹೀಗೆ ಗಣಪತಿಯದು 21 ರೂಪಗಳು ಜಗತ್ತಿನಲ್ಲಿ ಗೌರವನೀಯವಾಗಿವೆ.

ಒಮ್ಮೆ ದೇಹಬಾಧೆ ನಿಮಿತ್ತ ತುಸು ಹೊತ್ತು ಆ ಕಳಶವನ್ನು ರಕ್ಷಿಸಿಕೊಂಡಿರಲು ಗಣಪತಿಗೆ ತಿಳಿಸಿದಾಗ, ಗಣಪತಿ ಮೂರಾವರ್ತಿ ಕೂಗುವುದರೊಳಗೆ ಬರಬೇಕೆಂದು ಹೇಳುತ್ತಾ, ಮೂರಾವರ್ತಿ ಜಾಗ್ರತೆ ಕೂಗಿ ಕಳಶವನ್ನು ಕೆಳಗಿಟ್ಟ, ಕಾರಣ ಕುಪಿತರಾದ ಮುನಿಗಳು ಆ ಕಳಶದಂತೆ ನಿನ್ನ ಹೊಟ್ಟೆ ಒಡೆಯಲೆಂದು ಶಪಿಸಿದ್ದರಿಂದ ಗಣಪತಿಯ ಹೊಟ್ಟೆ ಬಿರಿಯಿತು.

## ಗಣಪತಿಯ ಪ್ರಸ್ತಾಪ

ಋಗ್ವೇದದಲ್ಲಿ ವರ್ಣಿತವಾಗಿದೆ.

ಎರಡನೆ ಮಂಡಲದಲ್ಲಿ "ಗಣಾನಾಂ ತ್ವಾ ಗಣಪತಿಂ ಹವಾಮಹೇ" ಎಂದು ಮುಂತಾಗಿ ವರ್ಣಿತವಾಗಿದೆ.

ನಾರಾಯಣೋಪನಿಷತ್‌ನಲ್ಲಿ ಗಣಪತಿಯ ಧ್ಯಾನಶ್ಲೋಕಗಳಿವೆ.

ತೈತ್ತರೀಯ ಬ್ರಾಹ್ಮಣದಲ್ಲಿ ಗಣಪತಿಯ ವರ್ಣನೆ ಇದೆ.

ಗೃಹ್ಯಸೂತ್ರದಲ್ಲಿ ಗಣಪತಿಯನ್ನು "ವಿನಾಯಕ, ವಿಘ್ನರಾಜ" ಇತ್ಯಾದಿ ಕರೆದಿರುತ್ತಾರೆ.

ಯಾಜ್ಞವಲ್ಕ್ಯ ಸ್ಮೃತಿಯಲ್ಲಿ ಗಣಪತಿಯ ಸ್ತೋತ್ರವಿದೆ.

ಬೋಧಾಯನ ಸೂತ್ರದಲ್ಲಿ ಗಣಪತಿಯ ಸ್ತೋತ್ರವಿದೆ.

ವಾಜಸನೇಯ ಸಂಹಿತೆಯಲ್ಲಿ ಗಣಪತಿಯ ಸ್ತೋತ್ರವಿದೆ.

ಯೋಗ ಗ್ರಂಥದಲ್ಲಿ ಗಣಪತಿಯ ವಿಚಾರವಿದೆ.

ಜೋತಿಷ್ಯ ಶಾಸ್ತ್ರದಲ್ಲಿ ಗಣಪತಿಗೆ ಬಹಳವಾದ ಸ್ಥಾನಮಾನ ದೊರಕಿದೆ.

ತಂತ್ರಶಾಸ್ತ್ರದಲ್ಲಿ ಅಗ್ರಸ್ಥಾನವನ್ನು ಗಣಪತಿಗೆ ಕೊಡಲಾಗಿದೆ.

ಮಹಾಬ್ರಾಹ್ಮಣದಲ್ಲಿ ಗಣಪತಿಯ ವಿಚಾರವಾದ ಉಲ್ಲೇಖವಿದೆ.

ಮತ್ಸ್ಯಪುರಾಣದಲ್ಲಿ ಪಾರ್ವತಿ ಮೈಕೊಳೆಯಿಂದ ಮಾಡಿದ ವಿಗ್ರಹವೇ ಗಣಪತಿ ಎಂದಿದೆ.

ಬ್ರಹ್ಮಾಂಡ ಪುರಾಣದಲ್ಲಿ ಗಣಪತಿಗೆ ಏಕದಂತವಾಗಲು ಕಾರಣ ಪರಶುರಾಮರು ಎಂಬ ಒಂದು ವಿಚಿತ್ರ ಕಥೆಯೇ ಹೊರಟಿದೆ.

ವರಾಹ ಪುರಾಣದಲ್ಲಿ ದೇವತೆಗಳ ವಿಘ್ನಪರಿಹಾರಕ ಮೂರ್ತಿ ಎಂದಿದೆ.

ಸ್ಕಾಂದ ಪುರಾಣದಲ್ಲಿ ನಾರದರ ಶಾಪದಿಂದ ಗಜದ ತಲೆಯು ಗಣಪತಿಗೆ ಬಂದ ಬಗ್ಗೆ, ಒಂದು ಇತಿಹಾಸವೇ ಹೊರಟಿದೆ.

ಗಣೇಶಪುರಾಣದಲ್ಲಿ 12,000 ಶ್ಲೋಕಗಳಿವೆ. ಚತುರ್ಯುಗದಲ್ಲಿ ಗಣಪತಿಯ ಆಕಾರಾದಿಗಳು ತಿಳಿಸಲ್ಪಟ್ಟಿವೆ.

ಕೆಂಪುಬಣ್ಣದ, ನಾಲ್ಕು ಕೈಗಳ, ಒಂದು ದಂತ ಮುರಿದ, ಕೈ ಒಂದರಲ್ಲಿ ಮೋದಕ ಧರಿಸಿ, ಇಲಿ ಮೇಲೆ ಕುಳಿತ, ಸುಂದರ ವಿಗ್ರಹನಾದ ಗಣಪತಿಯ ಆರಾಧನೆ ಅಂದಿನಿಂದ ಇಂದಿನವರೆಗೂ ಬಂದಿರುವ ವಿಗ್ರಹ.

ಕಾವ್ಯೇತಿಹಾಸಗಳಲ್ಲೂ ಗಣಪತಿಯ ಉಲ್ಲೇಖಗಳಿವೆ.

ಭಾರತವನ್ನು ಬರೆದವನು ಗಣಪತಿ ಎಂದಿದೆ.

ಬೌದ್ಧ ಗ್ರಂಥದಲ್ಲಿ (ತ್ರಿಪಿಟಕದಲ್ಲಿ) ಇಲಿ ವಾಹನ ಗಣಪತಿಯ ಉಲ್ಲೇಖವಿದೆ.

ಕ್ರಿ. ಶ. 6ನೆ ಶತಮಾನದಲ್ಲಿ ವರಾಹಮಿಹಿರನು ಗಣನಾಯಕನನ್ನು ಆರಾಧಿಸಿದ್ದಾನೆ.

ಕಾನಿಷ್ಕನ ಕಾಲದಲ್ಲಿ ಗಣಪತಿ ಇರುವ ನಾಣ್ಯಗಳ ಚಲಾವಣೆ ಇತ್ತು.

ಕ್ರಿ. ಶ. 7ನೆ ಶತಮಾನದ ಎಲ್ಲೋರ, ಅಜಂತಾ ಗುಹಾಂತರದೇವಾಲಯದಲ್ಲಿ ಗಣಪತಿಯ ವಿಗ್ರಹಗಳು ಕೆತ್ತಲ್ಪಟ್ಟಿವೆ.

(28ನೇ ಪುಟ ನೋಡಿ)

# ಕೃಷ್ಣನಾಟ್ಟಂ



ಕಲೆ ಹಿಂದು ನಾಡಿನ, ಜನಸಮುದಾಯದ, ಜೀವನ, ಸಂಸ್ಕೃತಿ ಧರ್ಮ-ಇತ್ಯಾದಿಗಳ ಮೇಲೆ ಬೆಳಕುಚೆಲ್ಲುವ ಒಂದು ಉತ್ತಮ ಸಮಾಜ ಶಿಕ್ಷಣ ಮಾಧ್ಯಮ. ಯಾವುದೇ ಕಲೆಯಿರಲಿ,ಅದು ಒಂದಲ್ಲ ಒಂದು ವಿಧದಿಂದ ಜನಮನಗಳನ್ನು ಸೂರೆಗೊಂಡು, ಕಾಂತಾಸಮ್ಮಿತ ವಿಧಾನದಿಂದ ದಿವ್ಯತ್ವಕ್ಕೇರಿಸುವ ಶಕ್ತಿಯುಳ್ಳದ್ದೂ ಆಗಿರುವುದು. ಇಂತಹ ಕಲೆಗಳಲ್ಲಿ ಜಾನಪದ ಕಲೆಗಳೆನಿಸಿದ ಕರ್ನಾಟಕದ 'ಯಕ್ಷಗಾನ', ಕೇರಳದ 'ಕಥಕ್ಕಳಿ' ಹಾಗೂ 'ಕೃಷ್ಣನಾಟ್ಟಂ' ಆಂಧ್ರದ 'ಕೂಚಿಪುಡಿ' ತಮಿಳುನಾಡಿನ 'ಭರತನಾಟ್ಯ' ಮುಂತಾದುವುಗಳು ಅತ್ಯಂತ ವಿಶಿಷ್ಟವಾದುವುಗಳು. ಇವು ಉತ್ತಮ ಕಲೆಗಳಷ್ಟೇ ಅಲ್ಲದೆ ಜನರಿಗೆ ಧಾರ್ಮಿಕ ಶಿಕ್ಷಣ ನೀಡುವಲ್ಲಿ ಉತ್ತಮ ಮಾಧ್ಯಮಗಳೂ ಆಗಿವೆಯೆಂದರೆ ಅತಿಶಯೋಕ್ತಿಯಾಗಲಾರದು.

'ಕೃಷ್ಣನಾಟ್ಟಂ' ಕಥಕ್ಕಳಿಯನ್ನೇ ಹೋಲುವ ಕೆಲವೊಂದು ವ್ಯತ್ಯಾಸಗಳಿಂದ ಕೂಡಿದ ಕೇರಳದ ವಿಶಿಷ್ಟ ಕಲೆ. ಭಕ್ತಿಯೇ ಮೂಲವಾಗಿ ಆವಿರ್ಭವಿಸಿದ ಈ ಕಲೆ ಭಕ್ತಿ ಪೋಷಕವೂ ಆಗಿದೆ.

ಹಿಂದೆ ಕೇರಳದಲ್ಲಿ ಸಾಮೂದಿರಿ ರಾಜಮನೆತನವು ಕಲೆಗೆ ಪ್ರಸಿದ್ಧವಾಗಿತ್ತು. ಆ ಪ್ರಸಿದ್ಧಿಗೆ ಒಂದು ಪ್ರತ್ಯಕ್ಷ ಉದಾಹರಣೆ ಇಂದಿಗೂ ನಡೆದು ಬರುತ್ತಿರುವ 'ಕೃಷ್ಣನಾಟ್ಟಂ'. ಕೃಷ್ಣನಾಟ್ಟವು ಕೇವಲ ಕಲಾ ಸಂಸ್ಕೃತಿಯ ದೃಷ್ಟಿಯಿಂದ ವಿಶಿಷ್ಟತೆ ಪಡೆದದ್ದಲ್ಲ. ಅದರಲ್ಲಿ ಅಡಕವಾಗಿರುವ ಭಕ್ತಿಭಾವವೇ ಅದರ ಶ್ರೇಷ್ಠತೆಗೆ ಮೂಲಕಾರಣ. ಆ ಭಕ್ತಿಭಾವನನ್ನು ಸಹೃದಯರೂ, ಭಕ್ತಸಮೂಹವೂ ಇಂದಿಗೂ ಮೆಚ್ಚಿಕೊಳ್ಳುತ್ತಾರೆ. ಕೃಷ್ಣನಾಟ್ಟದ ಸೃಷ್ಟಿಗೂ ಪುಣ್ಯಾತ್ಮನಾದ ಮಾನವೇದ ಕವಿಯ ಭಕ್ತಿವೈಭವವೇ ಕಾರಣವೆಂಬುದೂ ಪ್ರಸ್ತುತ್ಯ.

ಸುಮಾರು ಮುನ್ನೂರ ಮೂವತ್ತು ವರ್ಷಗಳಿಗೂ ಹಿಂದೆ, ಅಂದಿನ ಸಾಮೂದಿರಿ ರಾಜವಂಶದ ದೊರೆಯಾಗಿದ್ದ ಮಾನವೇದನಿಗೆ, ಶ್ರೀಕೃಷ್ಣನ ಪರಮಭಕ್ತರಾಗಿದ್ದ ಯತಿವರ್ಯ ಬಿಲ್ವಮಂಗಲರ ಅನುಗ್ರಹದಿಂದ ಶ್ರೀಕೃಷ್ಣನ ದರ್ಶನಭಾಗ್ಯ ಲಭಿಸಿತು. ಮಾನವೇದನು ಚಿಕ್ಕಂದಿನಿಂದಲೇ ಶ್ರೀಕೃಷ್ಣನಲ್ಲಿ ಭಕ್ತಿಯುಳ್ಳವನಾಗಿದ್ದನು. ತಾಯ್ತಂದೆಯರ ಮಾರ್ಗದರ್ಶನದಂತೆ ನಾಮಸಂಕೀರ್ತನ, ಹರಿಕಥಾಶ್ರವಣ, ಕ್ಷೇತ್ರದರ್ಶನ – ಮೊದಲಾದ ಭಕ್ತಿಸಾಧಕಗಳಾದ ಅನುಷ್ಠಾನಗಳನ್ನು ಬಹಳ ಶ್ರದ್ಧೆಯಿಂದ ನೆರವೇರಿಸುತ್ತಿದ್ದನು. ಸಂಸ್ಕೃತ ಅಭ್ಯಾಸದಲ್ಲೂ ಅತ್ಯಂತ ಶ್ರದ್ಧೆಯುಳ್ಳವನಾಗಿದ್ದನು. ಕ್ರಮೇಣ ಮಾನವೇದನು ಒಬ್ಬ ಉತ್ತಮ ವಿದ್ವಾಂಸನಾದನು. ಆದರೂ ಪಾಂಡಿತ್ಯ ಗರ್ವವು ಆತನ ಬಳಿ ಸುಳಿದಿರಲಿಲ್ಲ. ಎಲ್ಲ ಜ್ಞಾನ, ಪ್ರತಿಭೆ, ಪಾಂಡಿತ್ಯಗಳೂ ಭಗವಂತನ ಪ್ರೀತಿಸಂಪಾದನೆಗೆ ಎಂಬ ಪರಮಾರ್ಥವನ್ನರಿತ ಆತನು ಶ್ರೀಕೃಷ್ಣನನ್ನು ಮನಃಪೂರ್ವಕವಾದ ಭಕ್ತಿಯಿಂದ ಆಶ್ರಯಿಸಿದ್ದನು. ಈ ರೀತಿಯ ಮನೋಭಾವದಿಂದ ಕೂಡಿದ್ದ ಮಾನವೇದನಿಗೆ ಭಗವತ್ಪೂಜನೆಯೇ ಮೊದಲಾದ ಭಕ್ತಿಸಾಧಕವಾದ ಸತ್ಕರ್ಮಗಳಲ್ಲಿ ಹೆಚ್ಚಿನ ಆಸಕ್ತಿಯಿತ್ತು. ತನ್ನ ಜೀವನದ ಅವಧಿಯಲ್ಲಿ ಒಮ್ಮೆಯಾದರೂ ಸಚ್ಚಿದಾನಂದ ವಿಗ್ರಹನಾದ ಶ್ರೀಕೃಷ್ಣನನ್ನು ಪ್ರತ್ಯಕ್ಷವಾಗಿ ಕಾಣಬೇಕೆಂಬ ತೀವ್ರ ಹಂಬಲವು ಆ ಭಕ್ತ ಹೃದಯದಲ್ಲಿ ಮೂಡಿತು. ಆಗಾಗ ಗುರುವಾಯೂರಿಗೆ ಬಂದು, ದೇವರ ದರ್ಶನ, ಪ್ರಾರ್ಥನೆಗಳನ್ನು ಮಾಡುವುದು ರೂಢಿಯಾಯಿತು.

ತನ್ನ ಅನುಗ್ರಹ ಕಟಾಕ್ಷಕ್ಕೆ ಪಾತ್ರರಾಗುವ ಭಕ್ತರಿಗೆ, ಸಜ್ಜನರಾದ ತನ್ನ ಅಂತರಂಗ ಭಕ್ತರೆನಿಸಿದ ಪುಣ್ಯಾತ್ಮರನ್ನು ದರ್ಶನ ಮಾಡಿಸುವುದು ಭಗವಂತನ ದಿವ್ಯಾನುಗ್ರಹದ ರೀತಿಯಷ್ಟೆ! "ತತ್ರಾಪಿ ದುರ್ಲಭಂ ಮನ್ಯೇ ವೈಕುಂಠಪ್ರಿಯದರ್ಶನಂ" ಎಂಬ ಹೇಳಿಕೆಯಲ್ಲಿ ತ್ರಿಕಾಲ ಸತ್ಯವಿಲ್ಲವೇ, ಈ ದಿಶೆಯಲ್ಲಿ ಮಾನವೇದನಿಗೆ ಭಕ್ತೋತ್ತಮರಾದ ಬಿಲ್ವಮಂಗಲ ಯತಿಗಳ ದರ್ಶನವಾದುದು ಭಗವಂತನ ಅನುಗ್ರಹದ ಮುದ್ರೆಯೊತ್ತಿದುದರ ಕುರುಹೆನ್ನಬಹುದು.

ಭೂಲೋಕ ವೈಕುಂಠವೆನಿಸಿದ ಗುರುವಾಯುಪುರನಿವಾಸನಾದ ಬಾಲಗೋಪಾಲ ಮೂರ್ತಿಯನ್ನು ಪ್ರತ್ಯಕ್ಷವಾಗಿ ಪೂಜಿಸುವ ಮಹಾಭಾಗ್ಯಶಾಲಿಯಾದ ಬಿಲ್ವಮಂಗಲರಲ್ಲಿ, ಮಾನವೇದನು, ಪರಮಾತ್ಮನನ್ನು ಕಣ್ಣಾರೆ ನೋಡಬೇಕೆಂಬ ತನ್ನ ಅಭಿಲಾಷೆಯನ್ನು ತಿಳಿಸಿದನು. ಭಕ್ತನಾದ ಮಾನವೇದನ ಪ್ರಾಮಾಣಿಕವಾದ ನಮ್ರಪ್ರಾರ್ಥನೆಯನ್ನು ಬಿಲ್ವಮಂಗಲರು ಸ್ವೀಕರಿಸಿ, ಆಶೀರ್ವದಿಸಿದರು. ಆ ಸುಮುಹೂರ್ತವನ್ನೇ ಹಾರೈಸುತ್ತಾ ಮಾನವೇದನು ಭಕ್ತಿಪೂರ್ವಕ ಶ್ರೀಕೃಷ್ಣನನ್ನ ಭಜಿಸತೊಡಗಿದನು.

ಸದಾಕಾಲವೂ ಭಕ್ತಿಸುಧಾಸಿಂಧುವಿನಲ್ಲಿ ಮುಳುಗಿ, ಆನಂದಮಗ್ನರಾಗುತ್ತಿದ್ದ ಬಿಲ್ವ

ಶ್ರೀಮತಿ ಸಿ. ಎಚ್. ಲಕ್ಷ್ಮಿ

ಮಂಗಲರು ಎಂದಿನಂತೆ ಗುರುವಾಯೂರು ದೇವಾಲಯಕ್ಕೆ ಪ್ರದಕ್ಷಿಣೆಗೈಯುತ್ತಿರುವ ಸಮಯ, ಪ್ರಿಯಶಿಷ್ಯನಾದ ಮಾನವೇದನೂ ಹರಿನಾಮವನ್ನುಚ್ಚರಿಸುತ್ತಾ ಅವರನ್ನು ಹಿಂಬಾಲಿಸುತಿದ್ದಾನೆ. ಅವರು ಪ್ರದಕ್ಷಿಣೆ ಹಾಕುತ್ತಾ ಗರ್ಭಗುಡಿಯ ಆಗ್ನೇಯ ಭಾಗಕ್ಕೆ ಈಗ 'ಕೂತ್ತಂಬಲಂ' ಇರುವಲ್ಲಿಗೆ ಬಂದರು, ಆ ಕಾಲದಲ್ಲಿ ಈ ಕಟ್ಟಡವಿರುವ ಸ್ಥಾನದಲ್ಲಿ ಒಂದು ರೇಂಜಿಯ ಮರವಿದ್ದಿತಂತೆ. ಅದು ಹೂ ತಳಿರುಗಳಿಂದ ಕೂಡಿ, ಹಂದರದಂತೆ ಸುಂದರವಾಗಿ ಹರಡಿ, ಸೊಂಪನ್ನೂ, ತಂಪನ್ನೂ ನೀಡುತ್ತಿತ್ತು. ಅದು ಬಾಲಕೃಷ್ಣನ ಕೇಳೀರಂಗವಾದುದ್ದನ್ನು ಬಿಲ್ವಮಂಗಲರು ಅನೇಕವೇಳೆ ಕಂಡು ಆನಂದಾನುಭವ ಪಡೆದಿದ್ದರು. ತಮಗುಂಟಾಗಿದ್ದ ಈ ಭಾಗ್ಯ ತನ್ನ ಪ್ರಿಯ ಶಿಷ್ಯನಿಗೂ ದೊರೆಯಲೆಂಬ ಅನುಗ್ರಹ ಭಾವನೆ ಆ ಗುರುವರ್ಯರ ಹೃದಯದಲ್ಲಿ ಮೂಡಿ, ಆ ಕಡೆ ಕಣ್ಣು ಹಾಯಿಸಿದರು, ಮಾನವೇದನಿಗೆ 'ಆ ಕಡೆ ನೋಡು' ಎಂದು ಬೆರಳೆತ್ತಿ ತೋರಿದರು. ನೀಲಪ್ರಕಾಶವು ದಟ್ಟೈಸಿನಿಂತಿದ್ದ ಆ ಕಡೆಗೆ ಮಾನವೇದನ ಕಣ್ಣುಗಳು ಹೊರಳಿದವು. ಅದ್ಭುತವೂ, ಆಕರ್ಷಕವೂ, ಪರಮಾನಂದಕರವೂ ಆದ ನೋಟವನ್ನು ಕಂಡವು; ಶಿರದಲ್ಲಿ ನವಿಲು ಗರಿಗಳನ್ನು ಧರಿಸಿ, ಸುಂದರವಾದ ದಿವ್ಯ ಆಭರಣಗಳಿಂದಲೂ, ವನಮಾಲೆ, ಕಿಂಕಿಣಿ, ಕಾಲಂದುಗೆಗಳಿಂದಲೂ ಅಲಂಕರಿಸಿಕೊಂಡು ಮುದ್ದುಕೃಷ್ಣನು ಅಲ್ಲಿ ಲೀಲೆಯಾಡುತ್ತಿದ್ದನು. ಕೆಂದಾವರೆಯೆಸಳಿನಂತಹ ಸುಂದರವಾದ ಕಣ್ಣುಗಳು ಕರುಣಾಕಟಾಕ್ಷವನ್ನು ಬೀರುತಿದ್ದವು. ತುಟಿಗಳಲ್ಲಿ ಮಂದಹಾಸವು ಸೂಸುತ್ತಿತ್ತು. ರೇಂಜಿಯ ಹೂಗಳನ್ನು ರಾಶಿ ಮಾಡಿ, ಕೈಗಳ ತುಂಬಾ ತೆಗೆದು ಗಂಟೆಯಲ್ಲಿ ತುಂಬಿಸುತ್ತಿದ್ದ ತುಂಟಬಾಲಕ ಆನಂದಕಂದನಾದ ಆ ನೀಲಬಾಲನನ್ನು ನೋಡಿ ಮಾನವೇದನು ಆನಂದಪರವಶನಾದನು: ಭಕ್ತಿಭಾವದಿಂದ ಮೈಮರೆತನು. ಆ ಘನ ಸಚ್ಚಿದಾನಂದನನ್ನು ಕೈಗಳಿಂದ ಬಾಚಿ ಎತ್ತಿಕೊಳ್ಳಲು ಮುಂದಾದನು. ಬಿಲ್ವಮಂಗಲರು ನೋಡಲು ಮಾತ್ರ ಹೇಳಿದ್ದು: ಮುಟ್ಟಲು ಹೇಳಿಲ್ಲ" ಎಂದು ಮುದ್ದಾಗಿ ನುಡಿದು, ಬಾಲಕೃಷ್ಣನು ತಕ್ಷಣ ಮರೆಯಾದನು. ಆದರೆ ಎತ್ತಿಕೊಳ್ಳಲು ಚಾಚಿದ ಮಾನವೇದನ ಕೈಗಳಲ್ಲಿ ಎರಡು ಕಣ್ಣುಗಳುಳ್ಳ ಒಂದು ನವಿಲು ಗರಿ ಉಳಿದಿತ್ತು, ತನ್ನ ದರ್ಶನ, ಇದು ಸ್ವಪ್ನವಲ್ಲ, ನಿಜವೇ ಎಂಬುದನ್ನು ಸ್ಥಿರಪಡಿಸಲೋ ಎಂಬಂತೆ!

ಮಾನವೇದನು ಆ ಗರಿಯನ್ನೇ ಸಿಕ್ಕಿಸಿ ಒಂದು ಕಿರೀಟ ರಚಿಸಿ, ನೃತ್ತಮೊದಲಾಗಿ ಕೃಷ್ಣನಾಟ್ಟಂ ಎಂಬ ಕಲೆಯನ್ನು ಆರಂಭಿಸಿದನು. ಶ್ರೀಕೃಷ್ಣನ ಅವತಾರದಿಂದ ಸ್ವರ್ಗಾರೋಹಣದವರೆಗೆ ಎಂಟು ದಿವಸಗಳ ಆಟಗಳ ಕೃಷ್ಣನಿಗೂ ಆ ಕಿರೀಟ ಸರಿಹೊಂದುತ್ತಿದ್ದುದು, ಅದರ ಒಂದು ಮಹಿಮೆಯಾಗಿತ್ತು! ಕಾಲಾನಂತರ ಅಲ್ಲಿದ್ದ ರೇಂಜಿಯ ಮರವನ್ನು ಕಡಿದರು. ಮಾನವೇದನು ಅದರ ಕಟ್ಟಿಗೆಯಿಂದ ತಾನೆ ಒಂದು ವೇಣುಗೋಪಾಲನ ವಿಗ್ರಹವನ್ನು ರಚಿಸಿದನು. ಆ ವಿಗ್ರಹದ ಮುಂದೆ ಕುಳಿತು ಮಾನವೇದನು 'ಕೃಷ್ಣನಾಟ್ಟಂ' ಪ್ರಸಂಗಗಳನ್ನು ರಚಿಸಿದನಂತೆ.

'ಕೃಷ್ಣನಾಟ್ಟಂ' ಪ್ರಸಂಗದ ಹಾಡುಗಳು ಪ್ರೌಢವೂ, ಗಂಭಿರವೂ ಆದ ಭಾಷಾಶೈಲಿಯಿಂದ ಕೂಡಿದ್ದು,ಸಂಪೂರ್ಣ ಶ್ರೀಕೃಷ್ಣಲೀಲೆಯನ್ನು ಎಂಟುದಿವಸಗಳಲ್ಲಿ ಪ್ರದರ್ಶಿಸಲು ಅನುಕೂಲವಾಗುವಂತೆ ರಚಿಸಲಾಗಿತ್ತು. ಅಂದಿನ ಆ ಎರಡು ಕಣ್ಣುಗಳಿದ್ದ ನವಿಲು ಗರಿಯ ಕಿರೀಟ ಇತ್ತೀಚಿನ ಕಾಲದವರಗೆ ಉಪಯೋಗಿಸಲಾಗುತಿತ್ತು. ಸುಮಾರು 100ವರ್ಷಗಳ ಹಿಂದೆ ಸಾಮೂದಿರಿ ಅರಮನೆ ಅಗ್ನಿಆನಾಹುತಿಯಾದಾಗ ಅದು ನಾಶವಾಯಿತೆಂದು ಹೇಳುತ್ತಾರೆ. ಮಾನವೇದನು ರಚಿಸಿದ್ದ ವೇಣುಗೋಪಾಲನ ವಿಗ್ರಹವೂ ಆ ಅಗ್ನಿಯಲ್ಲೇ ಸುಟ್ಟುಹೋಯಿತು.

ಹಿಂದಿನ ಕಾಲದಲ್ಲಿ ಕೃಷ್ಣನಾಟ ನಡೆಯುವ ವೇಳೆಯಲ್ಲಿ ಗುರುವಾಯುಪುರೇಶನ ಗರ್ಭಗುಡಿಯ ಬಾಗಿಲು ತೆರೆದೇ ಇರುತ್ತಿತ್ತಂತೆ. ಭಗವಂತನಿಗೆ ಆಟ ನೋಡುವುದಕ್ಕಾಗಿ ಎಂಬುದೇ ಇದರ ಸಂಕಲ್ಪವಾಗಿತ್ತು. ಕೃಷ್ಣನಾಟ ನಡೆಯುವ ವೇಳೆಯಲ್ಲೊಮ್ಮೆ ಬಿಲ್ವಮಂಗಲರು ದೇವರ ದರ್ಶನಕ್ಕಾಗಿ ಬಂದರೆ ಗರ್ಭಗುಡಿಯಲ್ಲಿ ದೇವರನ್ನೇ ಕಾಣಲಿಲ್ಲವಂತೆ! ಅಂದು ಆಟ ರಾಸಕ್ರೀಡಾ ಪ್ರಸಂಗವಾಗಿತ್ತು. ರಂಗಸ್ಥಳದಲ್ಲಿ ಇಬ್ಬರು ಕೃಷ್ಣರನ್ನು ಕಂಡ ಸ್ವಾಮಿಗಳು ಅದ್ಭುತಸ್ತಬ್ಧರಾದರಂತೆ! ಆ ನಂತರ ಬಿಲ್ವಮಂಗಲರ ಆದೇಶದಂತೆ ಮೂಡು ಅಂಕಣದಲ್ಲಿ ನಡೆಯುತ್ತಿದ್ದ ಆಟವನ್ನು ಬಡಗು ಭಾಗಕ್ಕೆ ಸ್ಥಳಾಂತರಿಸಲಾಯಿತು. ಆಟವು ರಾತ್ರಿಯ ಪೂಜೆ ಕಳೆದು, ಗರ್ಭಗುಡಿ ಮುಚ್ಚಿದ ಬಳಿಕ ಆರಂಭವಾಗಿ, ಮುಂಜಾವ ಬಾಗಿಲು ತೆರೆಯುವ ವೇಳೆಗೆ ಮುಂಚಿತವಾಗಿ ಮುಗಿಯುವಂತೆ ಮಾಡಲಾದ ವ್ಯವಸ್ಥೆಯು ಈಗಲೂ ಹಾಗೆಯೇ ಮುಂದುವರಿಯುತ್ತಿದೆ.

ಕೃಷ್ಣನಾಟ್ಟ ದಿವ್ಯ ಚೈತನ್ಯವನ್ನೊಳಗೊಂಡ ಒಂದು ವಿಶಿಷ್ಟ ಕಲೆಯೆಂಬುದು ಅದನ್ನು ನೋಡಿದವರಿಗೆಲ್ಲಾ ಅನುಭವದ ಸಂಗತಿ. ಆಟ ಆಡಿಸುವುದಾಗಿ ಹರಕೆ ಹೊತ್ತವರಿಗೆ ಅವರ ಅಭೀಷ್ಟಗಳು ಕೈಗೂಡುತ್ತವೆ. ಸಂತಾನ ಪ್ರಾಪ್ತಿಗಾಗಿ ಅವತಾರ, ವಿವಾಹಕ್ಕಾಗಿ 'ಸ್ವಯಂವರ', ಸಕಲ ವಿಜಯಗಳಿಗೆ 'ಬಾಣಯುದ್ಧ' ವನ್ನು ಆಚರಿಸುವುದಿದೆ.

ಕೃಷ್ಣನಾಟ್ಟದ ಪದ್ಯಗಳು ಸಂಸ್ಕೃತ ಶಬ್ದ ಪ್ರಯೋಗವನ್ನೊಳಗೊಂಡ ಪ್ರೌಢ ಶೈಲಿಯಿಂದ ಕೂಡಿದೆ. ಇದು ಜನರಿಗೆ ಸರಿ ಅರ್ಥವಾಗಬೇಕಾದರೆ, ಹಾಡುಗಾರನು ಸಂಸ್ಕೃತದಲ್ಲಿ ಸಾಕಷ್ಟು ಪಾಂಡಿತ್ಯವುಳ್ಳವನಾಗಿರಬೇಕು. ಆಕರ್ಷಣೆಗಾಗಿ ಹೆಚ್ಚಿನ ಸಂಗೀತ ಜ್ಞಾನವೂ ಇರಬೇಕು. ರಂಗಭೂಮಿಯ ವೈಭವ ಹೆಚ್ಚಿಸುವದಕ್ಕಾಗಿ ಇತ್ತಿಚಿಗೆ ಚೆಂಡೆಯನ್ನೂ ಉಪಯೋಗಿಸತೊಡಗಿದ್ದಾರೆ.ಕೃಷ್ಣನಾಟ್ಟವು ಭಕ್ತಿಕರವಾದ ಸಾತ್ತ್ವಿಕ ಕಲೆಯಾದುದರಿಂದ ಚೆಂಡೆಯ ಉಪಯೋಗವಿಲ್ಲದಿರುವುದೇ ಅರ್ಥಪೂರ್ಣ ಮಾದರಿ.

ಹೀಗೆ ಮಾನ್ಯನಾದ ಮಾನವೇದನಿಂದ ಜನ್ಮತಾಳಿದ ಕೃಷ್ಣನಾಟ್ಟವು ಧಾರ್ಮಿಕ ಮೌಲ್ಯವನ್ನೊಳಗೊಂಡ ಒಂದು ವಿಶಿಷ್ಟಕಲೆ. ಇದನ್ನು ಉಳಿಸಿ ಬೆಳಸುವುದು ಕಲಾಪೋಷಣೆಗೆ ಮಾತ್ರವಲ್ಲ, ಧಾರ್ಮಿಕ ನೆಲೆ ನಿಲ್ಲುವಿಕೆಗೂ ಸಹಾಯಕವಾದ ಕರ್ತವ್ಯವಾಗಿದೆ.

---

# ಗುಣರತ್ನಕೋಶ

ಶ್ರೀ ಪರಾಶರಭಟ್ಟರಿಂದ ರಚಿತವಾದ ಗುಣರತ್ನಕೋಶ ಒಂದು ಅಪೂರ್ವವಾದ ಸ್ತೋತ್ರರತ್ನ. ಪರಾಶರಭಟ್ಟರು ರಾಮಾನುಜರ ಮುಖ್ಯ ಆಶೆಗಳನ್ನು ತೀರಿಸಿದ ಮಹಾನುಭಾವರು. ಯಾಮುನಾಚಾರ್ಯರ ಅಭೀಷ್ಟಗಳಲ್ಲಿ ಒಂದಾಗಿದ್ದ ವಿಷ್ಣು ಸಹಸ್ರನಾಮಕ್ಕೆ ಭಾಷ್ಯವನ್ನು ಬರೆದು ಋಷಿ ಋಣ, ಆಚಾರ್ಯ ಋಣವನ್ನು ತೀರಿಸಿದ ಪರಮ ಆಚಾರ್ಯರು. ವಿಶಿಷ್ಟಾದ್ವೈತ ಸಿದ್ಧಾಂತ ಸ್ಥಾಪನಾಚಾರ್ಯರಾದ ರಾಮಾನುಜರ ಮುಖ್ಯ ಶಿಷ್ಯರಲ್ಲಿ ಕೂರತ್ತಾಳ್ವಾನ್ ಎಂಬುವರು ತಮ್ಮ ನಿಷ್ಠೆಯಿಂದಲೂ, ವಿರಕ್ತಿಯಿಂದಲೂ, ವೈರಾಗ್ಯದಿಂದ ಉಂಛವೃತ್ತಿಯಿಂದ ಜೀವನ ನಡೆಸುತ್ತಿದ್ದರು. ಒಂದು ದಿನ ಜೋರಾದ ಮಳೆಯು ಹಿಡಿದುದರಿಂದ ಕೂರತ್ತಾಳ್ವಾನ್ ಉಂಛವೃತ್ತಿಗೆ ಹೋಗದೆ ಮನೆಯಲ್ಲೇ ಭಗವಂತನನ್ನು ಧ್ಯಾನಿಸುತ್ತ ಉಪವಾಸದಿಂದ ತಮ್ಮ ಪತ್ನಿಯಾದ ಆಂಡಾಳ್ ಜೊತೆ ಕುಳಿತಿದ್ದರು. ತಮ್ಮ ಪತಿ ಉಪವಾಸವಿರುವುದನ್ನು ಕಂಡು ತಾಳಲಾರದೆ ಆಕೆ ನೊಂದಳು. ಆಗ ಶ್ರೀರಂಗನಾಥನ ದೇವಸ್ಥಾನದಲ್ಲಿ ದೇವರಿಗೆ ನೈವೇದ್ಯವನ್ನು ಸಮರ್ಪಿಸುವ ಘಂಟಾನಾದ ಕೇಳಿ ಆಂಡಾಳ್ "ಸ್ವಾಮಿ ನಿನ್ನ ಭಕ್ತರು ಉಪವಾಸವಿರುವಾಗ ನೀನು ವೈಭವದಿಂದ ಊಟವನ್ನು ಸ್ವೀಕಾರ ಮಾಡುವುದು ಧರ್ಮವೆ" ಎಂಬುದಾಗಿ ಮನಸ್ಸಿನಲ್ಲಿ ನೆನೆಸಿಕೊಂಡಳು. ಸರ್ವಜ್ಞನೂ ಪರಮ ದಯಾಳುವಾದ ಭಗವಂತನು ತನ್ನ ಕೈಂಕರ್ಯಪರನಾದ ಉತ್ತಮ ನಂಬಿ ಎಂಬುವವನ ಮೂಲಕ ಕೂರೇಶರಿಗೆ ದೇವಸ್ಥಾನದಿಂದ ಪ್ರಸಾದವನ್ನು ಕಳುಹಿಸಿಕೊಟ್ಟನು. ರಂಗನಾಥನ ಪ್ರಸಾದ ಕಂಡ ಆಂಡಾಳ್ ಅದು ಪರಮಪುರುಷೋತ್ತಮನು ತಮಗೆ ದಯಪಾಲಿಸಿದ ಮಹಾಪ್ರಸಾದವೆಂದು ತಿಳಿದು ಭುಜಿಸಿದಳು. ಆ ದಿನವೇ ಆಂಡಾಳ್‌ದೇವಿಯು ಪತಿಯ ದಯೆಯಿಂದ ಗರ್ಭವನ್ನು ಧರಿಸಿದಳು. ಕ್ರಿ. ಶ. 1060ನೆಯ ಶುಭಕೃತ್ ಸಂವತ್ಸರ. ವೈಶಾಖ ಶುದ್ಧ ಪೂರ್ಣಿಮಾ ದಿನದಲ್ಲಿ ಅನೂರಾಧಾ ನಕ್ಷತ್ರದಲ್ಲಿ ಇಬ್ಬರು ಮಕ್ಕಳಿಗೆ ಜನನ ಕೊಟ್ಟಳು. ಈ ಮಕ್ಕಳೇ ಪರಾಶರಭಟ್ಟರು ಮತ್ತು ವ್ಯಾಸಭಟ್ಟರು. ಪರಾಶರ ಭಟ್ಟರು ಶ್ರೀರಂಗದಲ್ಲಿ ಪ್ರತಿದಿನ ದೇವರಿಗೆ ನಿವೇದನ ಮಾಡಲ್ಪಟ್ಟ ಪ್ರಸಾದದಿಂದ ಬೆಳೆದು ಬಂದರು. ಪರಾಶರಭಟ್ಟರ ನಾಮಕರಣಕ್ಕೆ ಬಂದ ರಾಮಾನುಜರು, ಎತ್ತಿಕೊಂಡ ಮಕ್ಕಳ ಕಿವಿಯಲ್ಲಿ ಎಂಬಾರ್ ಎಂಬುವ ಮಹನೀಯರು ದ್ವಯ ಮಂತ್ರವನ್ನು ಉಚ್ಚರಿಸಿದ್ದನ್ನು ಕಂಡು ಅವರೇ ಈ ಮಕ್ಕಳಿಗೆ ಆಚಾರ್ಯರಾಗಬೇಕೆಂದು ಅಪ್ಪಣೆ ಕೊಟ್ಟರು, ಎಂಬಾರ್‌ರವರೇ ಗೋವಿಂದಭಟ್ಟರೆಂಬ ಹೆಸರಿನಲ್ಲಿ ಮುಂದೆ ಪ್ರಸಿದ್ಧರಾದರು.

ಪರಾಶರಭಟ್ಟರು ತಮ್ಮ ಬುದ್ಧಿ ಪಾಂಡಿತ್ಯ ಪ್ರತಿಭೆಗಳಿಂದ ಬಾಲ್ಯದಲ್ಲಿಯೇ ಪ್ರಕಾಶಕ್ಕೆ ಬಂದರು. ಕೂರೇಶರು ತಮ್ಮ ಮಗನಿಗೆ ಸಕಾಲದಲ್ಲಿ ಉಪನಯನಮಾಡಿದರು. ಒಂದುಸಲ ಹೇಳಿಕೊಟ್ಟ ಮಾತ್ರಕ್ಕೆ ವೇದಮಂತ್ರಗಳನ್ನು ವಾಚೋವಿಧೇಯವಾಗಿ ಹೇಳುತ್ತಿದ್ದರು. ತಂದೆಯವರಿಂದ ದಿವ್ಯ ಪ್ರಬಂಧಗಳ ಮಂತ್ರಾರ್ಥ ರಹಸ್ಯಗಳನ್ನು ಕಲಿತರು. ಸಮಸ್ತ ಶಾಸ್ತ್ರ ಪಾರಂಗತರಾಗಿ ಬೆಳೆದುನಿಂತ ಪರಾಶರ ಭಟ್ಟರಿಗೆ ರಾಮಾನುಜರ ಆಚಾರ್ಯರಾದ ಮಹಾಪೂರ್ಣರ ಜ್ಞಾತಿಗಳಲ್ಲೊಬ್ಬರ ಮಗಳನ್ನು ವಿವಾಹ ಮಾಡಿದರು. ಭಟ್ಟರ್ ಹೇಗೆ ಸಕಲ ಶಾಸ್ತ್ರ ಪಾಂಡಿತ್ಯದಲ್ಲಿ ಅಪ್ರತಿಮರೋ, ಹಾಗೆಯೇ ಕವಿತೆಯಲ್ಲೂ ಅದ್ವಿತೀಯರು. ಇವರ ಪ್ರತಿಭೆಗೆ ಕಾರಣ ಶ್ರೀರಂಗನಾಥ ಹಾಗೂ ಭಗವದ್‌ರಾಮಾನುಜರ ಅನುಗ್ರಹ ಒಂದು ಕಡೆಯಾದರೆ ಮತ್ತೊಂದುಕಡೆ ವಿಲಕ್ಷಣವಾದ ಅವರ ಏಕಸಂಧಿಗ್ರಾಹಿಯಾದ ತಿಳುವಳಿಕೆ, ಅಭ್ಯಾಸ ಹಾಗೂ ತಪಸ್ಸು. ಶ್ರೀಭಾಷ್ಯಕಾರರ ಆದೇಶದಂತೆ ವಿಶಿಷ್ಟಾದ್ವೈತ ಸಿದ್ಧಾಂತ ಪ್ರಚಾರದಲ್ಲಿ ನಿರತರಾಗಿದ್ದರು. ಪ್ರತಿದಿನ ಪಾಠ ಪ್ರವಚನ ಗ್ರಂಥ ಕಾಲಕ್ಷೇಪ. ಗ್ರಂಥಗಳ ರಚನೆ ಹಾಗೂ ವ್ಯಾಖ್ಯಾನಗಳನ್ನು ಮಾಡುವುದರಲ್ಲಿ ನಿರತರಾಗಿದ್ದರು. ಇವರ ಪ್ರತಿಭೆಯನ್ನು ಕೇಳಿದ ಆ ದೇಶದ ಮಹಾರಾಜರಾದ ತ್ರಿಭುವನ ವೀರ ದೇವರಾಯನು ಭಟ್ಟರನ್ನು ಆಸ್ಥಾನಕ್ಕೆ ಬರುವಂತೆ ಹೇಳಿ ಕಳುಹಿಸಲು "ಶ್ರೀರಂಗನಾಥನ ಸೇವೆ ಮಾಡಿದ ಈ ಕೈಗಳನ್ನು ಮತ್ತೊಬ್ಬರಿಗೆ ಕೈ ಮುಗಿದು ಅಪಚಾರವನ್ನು ಮಾಡಲಾರೆ" ಎಂಬುದಾಗಿ ಹೇಳಿ ಕಳುಹಿಸಿದರಂತೆ. ವೇದಾಂತಿ ಎಂಬ ಹೆಸರಿನ ವಿದ್ವಾಂಸರು ಆಗ್ಗ ಮೇಲುಕೋಟೆಗೆ ಸಮೀಪ ಗ್ರಾಮವಾದ ಕಂಗೋರೆ ಎಂಬ ಗ್ರಾಮದಲ್ಲಿ ಪ್ರಸಿದ್ಧರಾಗಿದ್ದರು. ಇವರು ಪ್ರತಿದಿನ ಅನೇಕ ವಿದ್ವಾಂಸರಿಗೆ ಅನ್ನಸಂತರ್ಪಣೆ ಮಾಡುತ್ತಿದ್ದರು. ಇವರನ್ನು ಅದುವರೆಗೂ ಯಾರೂ ವಾದದಲ್ಲಿ ಗೆದ್ದಿರಲಿಲ್ಲ. ಈ ವಿಷಯವನ್ನು ತಿಳಿದ ರಾಮಾನುಜಾಚಾರ್ಯರು ಪರಾಶರಭಟ್ಟರನ್ನು ಕರೆದು ವೇದಾಂತಿಯನ್ನು ವಾದದಲ್ಲಿ ಗೆದ್ದುಬರುವಂತೆ ತಿಳಿಸಿದರು. ಪರಾಶರಭಟ್ಟರು ಮೇಲುಕೋಟೆಗೆ ಬಂದು ಶ್ರೀ ತಿರುನಾರಾಯಣನ ದರ್ಶನ ಪಡೆದು ವೇದಾಂತಿಯ ಗ್ರಾಮಕ್ಕೆ ಬಂದರು. ಭೋಜನಶಾಲೆಗೆ ಬಂದು ಅತಿಥಿಯಾದ ತಮಗೆ ವಾದಭಿಕ್ಷೆಯನ್ನು ನೀಡುವಂತೆ ವೇದಾಂತಿಯನ್ನು ಪ್ರಾರ್ಥಿಸಿಕೊಳ್ಳಲು ವೇದಾಂತಿಯು ಪರಾಶರಭಟ್ಟರೊಡನೆ ಹಲವು ದಿನ ವಾದಮಾಡಿ ಸೋತು ಅವರ ಶಿಷ್ಯರಾದರು. ಈ ಮಹಾನುಭವರೇ ಮುಂದೆ "ನಂಜೀಯರು" ಎಂಬುವ ಹೆಸರಿನಿಂದ ಪ್ರಸಿದ್ಧರಾದರು. ಪರಾಶರಭಟ್ಟರಿಂದ ವಿರಚಿತವಾದ ಗ್ರಂಥಗಳು :– 1) ಶ್ರೀ ವಿಷ್ಣು ಸಹಸ್ರನಾಮ ಭಾಷ್ಯ 2) ಅಷ್ಟಶ್ಲೋಕಿ (ತಿರುಮಂತ್ರ ವ್ಯಾಖ್ಯಾನ ರೂಪದ್ದು) 3) ಶ್ರೀರಂಗರಾಜಸ್ತವ 4) ತತ್ತ್ವರತ್ನಾಕರ 5) ಶ್ರೀ ಗುಣರತ್ನಕೋಶ 6) ಪ್ರಣವ ವಿವರಣ 7) ಕ್ರಿಯಾದೀಪ 8) ತತ್ತ್ವತ್ರಯ ಶ್ಲೋಕ. ಆಳ್ವಾರರ ಶ್ರೀ ಸೂಕ್ತಿಗಳ ಅರ್ಥವಿವರಣೆಯನ್ನು ನೀಡುವ ಭಟ್ಟರ ನಿರ್ವಾಹ ಪ್ರಬಂಧಗಳ ಸಾರ ಎಂಬುವುದೂ ಪ್ರಸಾರದಲ್ಲಿದೆ. ಪರಾಶರಭಟ್ಟರವರು ರಚಿಸಿರುವ ಶ್ರೀ ಗುಣರತ್ನ ಕೋಶವೆಂಬ ಲಕ್ಷ್ಮೀ ದೇವಿಯ ಸ್ತೋತ್ರಮಾಲೆಯಲ್ಲಿ ಲಕ್ಷ್ಮಿಯನ್ನು ನಾನಾಬಗೆಯಾಗಿ ಭಕ್ತಿಯಿಂದ ಕೊಂಡಾಡಿದ್ದಾರೆ. ಈಶ್ವರನು ಸರ್ವಶಕ್ತ, ಸೃಷ್ಟಿಸ್ಥಿತಿಲಯಗಳಿಗೆ ಕಾರಣನು. ಭಗವಂತನಿಗೆ ಲಕ್ಷ್ಮಿಯು ನಿತ್ಯಾನಪಾಯಿನಿ, ಚೇತನನ ಉದ್ಧಾರಕ್ಕಾಗಿ ಭಗವಂತನನ್ನು ಮೊರೆಯಿಡುವ ಕರುಣಾಮಯಿ ಆಕೆ. ಶ್ರೀಮನ್ನಾರಾಯಣನಿಗೆ ಸದಾ ಅನುಕೂಲೆಯಾಗಿ ಭಕ್ತರ ಉದ್ಧಾರಕ್ಕಾಗಿ ಸಂಕಲ್ಪವನ್ನು ಹೊತ್ತ ಮಹಾತಾಯಿ. ಶ್ರೀ ಗುಣರತ್ನಕೋಶದ ಮೊದಲನೆಯ ಶ್ಲೋಕ–

ಶ್ರಿಯೈ ಸಮಸ್ತ ಚಿದಚಿತ್
ವಿಧಾನ ವ್ಯಸನಂ ಹರೇಃ।
ಅಂಗೀಕಾರಿಭಿ ರಾಲೋಕೈಃ
ಸಾರ್ಥಯನ್ತ್ಯೈ ಕೃತೋಽಂಜಲಿಃ॥

ಎಂಬುವ ಮಂಗಳ ಶ್ಲೋಕದಲ್ಲಿ "ಅಂಜಲಿಃ ಪರಮಾ ಮುದ್ರಾ ಕ್ಷಿಪ್ರಂ ದೇವಪ್ರಸಾದಿನೀ" ಎಂಬಂತೆ ಭಗವಂತನ ಅನುಗ್ರಹವನ್ನು ಕೊಡುವ ಅಂಜಲಿಯನ್ನು ಮಾಡುವ ಮೂಲಕ ನಮಸ್ಕಾರವನ್ನು ಮಾಡುತ್ತಾರೆ. ಎರಡನೆಯ ಶ್ಲೋಕದಲ್ಲಿ ಸಕಲ ಕಾರಣಗಳಿಗೆ ಮಹಾಲಕ್ಷ್ಮಿಯ ಕಟಾಕ್ಷ ಒಂದು ಲತೆಯಂತೆ. ಈ ಲತೆಯು ಏಳುಲೋಕ

ಶ್ರೀ ಕಂದಾಡೈ ಕೇಶವನ್

ಗಳ ಉತ್ಪತ್ತಿಯೇ ಚಿಗುರಿದಂತಾಗಿ, ಸ್ಥಿತಿಯೇ ಮೊಗ್ಗಾಗಿ ಭಕ್ತರ ಉದ್ಧಾರಕ್ಕಾಗಿ ಶ್ರೀರಂಗದಲ್ಲಿ ಮಂಗಳಕರಳಾದ ಶ್ರೀರಂಗನಾಥನ ಸಾಮ್ರಾಜ್ಯ ಲಕ್ಷ್ಮಿಯನ್ನು ನಾನು ಆಶ್ರಯಿಸುತ್ತೇನೆ ಎಂಬುದಾಗಿ ಪ್ರಾರ್ಥಿಸುವ ಶ್ಲೋಕ-

ಉಲ್ಲಾಸ ಪಲ್ಲವಿತ
ಪಾಲಿತ ಸಪ್ತಲೋಕೀ
ನಿರ್ವಾಹ ಕೋರಕಿತ ನೇಮ
ಕಟಾಕ್ಷ ಲೀಲಾಂ
ಶ್ರೀರಂಗ ಹರ್ಮ್ಯ ತಲ
ಮಂಗಲ ದೀಪರೇಖಾಂ
ಶ್ರೀರಂಗರಾಜ ಮಹಿಷೀಂ
ಶ್ರಿಯಮಾಶ್ರಯಾಮಃ ॥

ಎರಡನೆಯ ಶ್ಲೋಕದಲ್ಲೂ ಕೂಡ ಭಟ್ಟರವರು ಲಕ್ಷ್ಮಿಯನ್ನು ಕಲ್ಪವಲ್ಲಿಯಂತೆ ಪ್ರಕಾಶಿಸುತ್ತಿರುವಳು ಎಂಬುವುದಾಗಿ ಹೇಳುತ್ತಾ ಮಹಾಲಕ್ಷ್ಮಿಯ ಕುಚಗಳು ಮೊಗ್ಗಿನಂತಿವೆ, ನೇತ್ರಗಳು ಅರಳಿದ ಹೂವಿನಂತೆ ವಿಶಾಲವಾಗಿವೆ. ಕಣ್ಣಿನ ಗುಡ್ಡೆಗಳು ವಿಕಸಿತ ಪುಷ್ಪದಲ್ಲಿರುವ ಭ್ರಮರದಂತೆ ಕಂಗೊಳಿಸುತ್ತಿವೆ. ಇಂತಹ ಮಹಾಲಕ್ಷ್ಮಿಯ ಶರೀರವನ್ನು ಅಪ್ಪಿಕೊಂಡಿರುವ ಶ್ರೀಮನ್ನಾರಾಯಣನು ತನ್ನ ಜ್ಞಾನ ಹಾಗೂ ಸಕಲ ಸಂಪತ್ತನ್ನು ಆಕೆಗೆ ನೀಡಿರುವುದರಿಂದ ಆಕೆಯ ಕಟಾಕ್ಷ ನಿರೀಕ್ಷೆ ಅವಶ್ಯಕ ಎಂಬುವುದಾಗಿ ಹೇಳಿದ್ದಾರೆ.

ಪರಾಶರಭಟ್ಟರ್‌ರವರು ಸಕಲ ಶಾಸ್ತ್ರಗಳಲ್ಲಿ ಪಂಡಿತರಾಗಿದ್ದರಿಂದಲೂ ಹಾಗೂ ಕವಿತೆಯಲ್ಲಿ ಅಪ್ರತಿಮ ಪ್ರತಿಭೆ ಹೊಂದಿದ್ದರಿಂದಲೂ ಅವರ ಈ ಕೃತಿಯ ಎಲ್ಲಾ ಶ್ಲೋಕಗಳು ಸುಂದರವಾಗಿವೆ. ಭಗವಂತನು ಲೋಕಾನುಗ್ರಹಕ್ಕಾಗಿ ಅವತಾರಗಳನ್ನು ಮಾಡಿದಾಗ ಮಹಾಲಕ್ಷ್ಮಿಯೂ ಕೂಡ ಅವನಿಗೆ ಅನುರೂಪವಾದ ಅವತಾರಗಳನ್ನು ಎತ್ತಿ ಚೇತನರ ಉದ್ಧಾರವನ್ನು ಮಾಡಿದ್ದಾಳೆ. ಲಕ್ಷ್ಮಿಯು ಶ್ರೀಮನ್ನಾರಾಯಣನ ವಕ್ಷಸ್ಥಲವನ್ನಾಶ್ರಯಿಸಿ ನೆಲೆಸಿರುವುದರಿಂದಲೇ ಉಪನಿಷತ್ತುಗಳೂ ಕೂಡ ಯೋಗಿಗಳ ಮತದಂತೆ ವಿಷ್ಣುವೇ ಪರತತ್ತ್ವವೆಂದು ನಿಶ್ಚಯಿಸಿವೆ.

ಹನ್ನೆರಡನೆಯ ಶ್ಲೋಕದಲ್ಲಿ ಭಕ್ತಿ ಪ್ರಪತ್ತಿಗಳೇ ಸಾಕ್ಷಾತ್ಕಾರಕ್ಕೆ ಸುಲಭ ಸಾಧನೆಗಳು ಎಂಬುದಾಗಿ ವಿವರಿಸುವಾಗ;

ಮನಸಿ ವಿಲಸಿತಾಕ್ಷ್ಣಾ
ಭಕ್ತಿ ಸಿದ್ಧಾಂಜನೇನ ।
ಶ್ರುತಿಶಿರಸಿ ನಿಗೂಢಂ
ಲಕ್ಷ್ಮಿ ತೇ ವೀಕ್ಷ್ಯಮಾಣಾಃ ।
ನಿಧಿಮಿವ ಮಹಿಮಾನಂ
ಭುಂಜತೇ ಯೇಽಪಿ ಧನ್ಯಾ
ನನು ಭಗವತಿ ದೈವೀಂ
ಸಂಪದ ತೇಽಭಿಜಾತಾಃ ॥

ಎಲ್ಲೆ ಮಹಾಲಕ್ಷ್ಮಿಯೇ ಕೆಲವು ಭಕ್ತರು ನಿನ್ನನ್ನು ಭಕ್ತಿಯಿಂದ ಸೇವಿಸಿ ಸಿದ್ಧಿಯನ್ನು ಪಡೆದು ನಿನ್ನ ಮಹಿಮೆಯನ್ನು ಕೊಂಡಾಡಿ ಧನ್ಯರಾಗುತ್ತಾರೆ. ಎಂಬುದಾಗಿ ಹೊಗಳುತ್ತಾ ಮುಂದಿನ ಶ್ಲೋಕದಲ್ಲಿ

"ಅಸ್ಯೇಶಾನಾ ಜಗತೋ ವಿಷ್ಣುಪತ್ನೀ"
"ಹಿರಣ್ಯವರ್ಣಾಂ ಹರಿಣೀಂ"
"ಉತಾಮೃತತ್ವಸ್ಯೇಶಾನಃ"
"ದೇವ ಏಕೋ ನಾರಾಯಣಃ"
"ಅದ್ಭ್ಯಸ್ಸಂಭೂತಃ ಪೃಥಿವ್ಯೈರಸಾಚ್ಚ"
"ಹ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ"

ಎನ್ನುವರು. ಶ್ರುತಿವಾಕ್ಯ, ಶ್ರೀಸೂಕ್ತ, ಪುರುಷ

---



ಸೂಕ್ತ, ನಾರಾಯಣೋಪನಿಷತ್ ಮುಂತಾದುವುಗಳಲ್ಲಿ ಕೊಂಡಾಡಲ್ಪಟ್ಟಿರುವ ನಾರಾಯಣನ ಮಹಿಮೆಯನ್ನು ಎತ್ತಿ ತೋರಿಸುವ ಈ ಶ್ಲೋಕವು ಬಹುಅರ್ಥಗರ್ಭಿತವಾಗಿಯೂ ಸುಂದರವಾಗಿಯೂ ಇದೆ

"ಅಸ್ಯೇಶಾನಾ ಜಗತ ಇತಿ
ತೇ ಧೀಮಹೇ ಯಾಂ ಸಮೃದ್ಧಿಂ।
ಶ್ರೀಶ್ರೀಸೂಕ್ತಂ ಬಹುಮುಖಯತೇ
ತಾಂ ಚ ಶಾಖಾನುಶಾಖಂ।
ಈಷ್ಟೇ ಕಶ್ಚಿಜ್ಜಗತ
ಇತಿ ಯಃ ಪೌರುಷೇ ಸೂಕ್ತ ಉಕ್ತಃ।
ತಂ ಚ ತ್ವತ್ತ್ವಂ ಪತಿ
ಮಧಿಜಗಾ ವೃತ್ತರಶ್ಚಾನುವಾಕಃ॥

ಇಲ್ಲಿ ಭಟ್ಟರವರು ಲಕ್ಷ್ಮಿಯನ್ನು ಕುರಿತು "ಎಲೈ ವಿಷ್ಣುಪತ್ನಿಯಾದ ಮಹಾಲಕ್ಷ್ಮಿಯೇ ಈ ಜಗದ ನಾಯಕಿಯು–ಅಸ್ಯೇಶಾನಾಜಗತೋ ವಿಷ್ಣುಪತ್ನೀ – ಎಂಬ ಶ್ರುತಿವಾಕ್ಯದಿಂದ ನಿನ್ನ ಯಾವ ಐಶ್ವರ್ಯವನ್ನು ಉಪಾಸನೆ ಮಾಡುತ್ತಾರೋ ಆ ಮಹಿಮೆಯ ಐಶ್ವರ್ಯವನ್ನು ಮತ್ತು ವೇದದ ಇತರ ಭಾಗಗಳಲ್ಲಿ ಹೊಗಳಿರುವ ನಿನ್ನ ಮಹಿಮಾವಿಶೇಷವನ್ನೂ 'ಹಿರಣ್ಯವರ್ಣಾಂ ಹರಿಣೀ' ಇತ್ಯಾದಿ ಶ್ರೀ ಸೂಕ್ತವೂ ಹಲವು ಕವಲ್ಗಳಾಗಿ ಕೊಂಡಾಡುತ್ತಿವೆ. ಪುರುಷಸೂಕ್ತವಲ್ಲಾದರೋ ಒಬ್ಬನೇ ಪುರುಷನು ಈ ಪ್ರಪಂಚದ ಸ್ವಾಮಿ ಎಂಬುದಾಗಿ ವಿವರಿಸುತ್ತಾ ಇದೆ. ಅಂತಹ ಶ್ರೀಮನ್ನಾರಾಯಣನನ್ನು ಮುಂದಿನ ಅನುವಾಕ್ಯಗಳಲ್ಲೂ ನಾರಾಯಣ ಉಪನಿಷತ್ತಿನಲ್ಲೂ ವಿಶೇಷವಾಗಿ ಕೊಂಡಾಡಿರುವುದು ನಿನ್ನ ವೈಭವವನ್ನು ಕೊಂಡಾಡುವಂತಾಯಿತು."-ಮುಂದಿನ ಶ್ಲೋಕದಲ್ಲಿ ಭಟ್ಟರ್‌ರವರು ಮಹಾಲಕ್ಷ್ಮಿಯ ಮಹಿಮೆಯನ್ನು ಹೊಗಳುತ್ತಾ "ತಾಯಿ ನಿನ್ನ ಮಹಿಮೆಯನ್ನು ಹೊಗಳಿ ನಲಿದಿರುವುದು ವೇದ ಉಪನಿಷತ್‌ಗಳೇ ಅಲ್ಲ; ರಾಮಾಯಣಕ್ಕೆ ಮುಖ್ಯಾಧಾರವೂ ನೀನೆ. ಆದ್ದರಿಂದಲೇ ವಾಲ್ಮೀಕಿ ಋಷಿಗಳು "ಸೀತಾಯಾಃ ಚರಿತಂ ಮಹತ್" ಎಂಬುದಾಗಿ ಹೊಗಳಿದ್ದಾರೆ. ಶ್ರುತಿ, ಸ್ಮೃತಿ, ಇತಿಹಾಸ ಪುರಾಣಗಳೂ ಕೂಡ ನಿನ್ನ ವೈಭವವನ್ನೇ ಪ್ರಚಾರಮಾಡಿವೆ" ಎನ್ನುವರು. ಆಕೆ ಶ್ರೀರಂಗರಾಜಮಹಿಷಿ, ಶ್ರೀಮನ್ನಾರಾಯಣನೇ ಪರತತ್ತ್ವ. ಅವನು ನಿಗ್ರಹ ಮತ್ತು ಅನುಗ್ರಹ ಸಂಕಲ್ಪವುಳ್ಳವನು. ಶ್ರೀಲಕ್ಷ್ಮಿಯು ಅನುಗ್ರಹ ಸ್ವರೂಪಳು. ಸಮಸ್ತ ಲೋಕಗಳಿಗೆ ಆಕೆ ಮಾತೆ. ನಾರಾಯಣನನ್ನು ಬಿಟ್ಟು ಒಂದು ಕ್ಷಣ ಇರಲಾರಳು. ಚೇತನನ ಪರವಾಗಿ ಪರಮಾತ್ಮನನ್ನು ಕರುಣೆ ತೋರುವಂತೆ ಬೇಡುವ ಕಲ್ಪವೃಕ್ಷ ಆಕೆ. ಪ್ರೇಮ ಸ್ವರೂಪಿಣಿ, ಚೇತನರ ಉಜ್ಜೀವನಕ್ಕೆ ಸಹಕಾರಿಣಿ, ಪುರುಷಕಾರ ಸ್ವರೂಪಳು, ಜಗನ್ಮಾತೆ. ವಿಶ್ವವು ಪರಮಾತ್ಮನ ದೇಹ; ವಿಶ್ವವು ಅವನಲ್ಲಿ ಅಡಗಿದೆ. ಅವನು ಅವನು ವಿಶ್ವದಲ್ಲಿ ಅಡಗಿದ್ದಾನೆ. ಪ್ರಕೃತಿಯಲ್ಲೂ ಜೀವರಾಶಿಯಲ್ಲೂ ವ್ಯಾಪಕನಾಗಿದ್ದಾನೆ. ಅಂತೆಯೇ ಮಹಾಲಕ್ಷ್ಮಿಯೂ ಕೂಡ ಪತಿಗೆ ಸಹಾಯ ಚೇತನ ವಸ್ತುವಾಗಿ 'ಶ್ರಯತೀತಿ ಶ್ರೀಃ ಶ್ರೀಯತೇ ಇತಿ ಶ್ರೀಃ' ಎಂಬ ಪ್ರಮಾಣದಿಂದ ಚೇತನರ ಉದ್ಧಾರಕ್ಕಾಗಿ ಪಣತೊಟ್ಟ ನಾರಾಯಣನನ್ನೇ ಆಶ್ರಯಿಸಿದ್ದಾಳೆ. ಪ್ರಪಂಚದಲ್ಲಿರುವ ಎಲ್ಲಾ ಅತಿಶಯ ವಸ್ತುಗಳು ಪ್ರಕೃತಿಯ (ಲಕ್ಷ್ಮಿಯ) ಕೃಪಾಬಿಂದುಗಳೇ. ಅಷ್ಟೈಶ್ವರ್ಯಗಳು ಅವಳ ಕರುಣೆಯಿಂದ ಆದುವು. ಸಣ್ಣ ಹಳ್ಳಿಯ ಯಜಮಾನನಿಂದ ಚಕ್ರವರ್ತಿಯವರೆಗೂ ಪಡೆದ ಐಶ್ವರ್ಯ ಆಕೆಯ ಕಟಾಕ್ಷದ ಅಮೃತ ಅಭಿಷಾನ, (ತುಂಗಂ ಮಂಗಳಂ ಉಜ್ವಲಂ). ಉನ್ನತ ಹಿಮಗಿರಿಗಳು, ಪುಣ್ಯಕರವಾದ ಯಜ್ಞಯಾಗಾದಿಗಳು, (ಪುನಃ ಪಾವನಂ ಧನ್ಯಂ) ಪಾವನ ಪುಣ್ಯ



ನದಿಗಳು, ಭಾಗ್ಯವನ್ನು ನೀಡುವ ನವನಿಧಿಗಳು, (ಮಹಾಪದ್ಮ, ಪದ್ಮ, ಶಂಖ, ಮಕರ, ಕಚ್ಛಪ, ಮುಕುಂದ, ಕುಂದ, ನೀಲಾ, ವೀರಾ) ಆಕೆಯ ಕರುಣಾ ಕಟಾಕ್ಷದ ಐಶ್ವರ್ಯ ಬಿಂದುಗಳು.

ಅಮೃತ ನಳಿನಿಯು ಚೇತನರನ್ನು ಕಾಪಾಡುವ ಶಕ್ತಿಯುಳ್ಳವಳು. ಮಹಾಲಕ್ಷ್ಮಿಯು ಯಾರನ್ನು ಕರುಣಿಸಬೇಕೆಂದು ಇಚ್ಛೈಪಡುತ್ತಾಳೋ, ಆ ಕ್ಷಣವೇ ಅವರ ಕಡೆಗೆ ಬುದ್ಧಿ, ಮಾತು, ಧೈರ್ಯ, ಪ್ರೀತಿ, ಸಂಪತ್ತು, ತಾವಾಗಿಯೇ ಧಾವಿಸಿ ಹೋಗುತ್ತವೆ. ಜಗತ್ತಿನ ಸೃಷ್ಟಿ ಸ್ಥಿತಿಲಯಗಳಿಗೆ ಕಾರಣ ಭೂತಳು ಲಕ್ಷ್ಮಿಯೇ. ಉಚ್ಚ ನೀಚ ಸ್ಥಿತಿಯಲ್ಲಿ ಮಾನವನನ್ನು ಕೊಂಡೊಯ್ಯುವಳೂ ಲಕ್ಷ್ಮಿಯೇ. ಈಶ್ವರನು ಜಗತ್ತನ್ನು ಸೃಷ್ಟಿಸಿರುವುದು ಲಕ್ಷ್ಮಿಯ ವಿಹಾರಕ್ಕಾಗಿ, ಕಾರಣ ಅವಳು ಜಗನ್ಮಾತೆ. ಎಲ್ಲಾ ಜೀವರಾಶಿಗಳು ಶಕ್ತಿ ಸ್ವರೂಪಿಣಿಯಾದ ಲಕ್ಷ್ಮಿಯ ನಿರ್ಹೇತುಕ ಕೃಪೆಯಿಂದ ಪೋಷಿಸಲ್ಪಡುತ್ತಿವೆ. ಎಂಬುವುದಾಗಿ ಹೇಳುತ್ತಾ 22ನೆಯ ಶ್ಲೋಕದಲ್ಲಿ

"ಕ್ರೀಡಾಪಾಮಖಿಲಂ ಚರಾಚರ
ಮಿದಂ ಭೋಗ್ಯೇ ವಿಭೂತಿಃ ಪರಾ।
ಪುಣ್ಯಾತ್ಮೇ ಪರಿಚಾರಕರ್ಮಣಿ
ಸದಾ ಪಶ್ಯಂತಿ ಯೇ ಸೂರಯಃ।
ಶ್ರೀರಂಗೇಶ್ವರದೇವಿ ಕೇವಲ
ಕೃಪಾ ನಿರ್ವಾಹ್ಯ ವರ್ಗೇ ವಯಂ
ಶೇಷಿತ್ವೇ ಪರಮಃ ಪುಮಾನ್
ಪರಿಕರಾ ಹ್ಯೇತೇ ತವ ಸ್ವಾರಣೇ॥

"ಎಲೈ ಶ್ರೀರಂಗನಾಯಕಿಯೇ ಸಮಸ್ತ ಚರಾಚರ ಜಗತ್ತು ನಿನ್ನ ಕ್ರೀಡಾರಂಗ. ನಿನ್ನ ಸುಖಕ್ಕಾಗಿ ಇದು ವಿಲಾಸಲು. ಪುಣ್ಯವಂತರಾದ ನಿತ್ಯ ಸೂರಿಗಳು ನಿನ್ನ ಪರಿಚರ್ಯೆಯಲ್ಲಿ, ಪರಮಪುರುಷನಾದ ಪುರುಷೋತ್ತಮನು ನಿನ್ನ ಸ್ವಾಮಿತ್ವದಲ್ಲಿ, ಜೀವರಾಶಿಗಳಾದ ನಾವು ನಿನ್ನ ಕೃಪೆಗಾಗಿ ಹಾತೊರೆಯುವ ಉಪಕರಣ ಸಾಮಗ್ರಿಗಳಾಗಿ ಇದ್ದೇವೆ" ಎಂಬುದಾಗಿ ಸ್ತುತಿಸುತ್ತಾರೆ.

ಮುಂದಿನ ಶ್ಲೋಕಗಳಲ್ಲಿ ಶ್ರೀರಂಗನಗರದ ವರ್ಣನೆ ಹಾಗೂ ಅಲ್ಲಿ ರಂಗನಾಥನ ಆಸ್ಥಾನ ವರ್ಣನೆ ಇವೆ. ಇಪ್ಪತ್ತಾರನೆಯ ಶ್ಲೋಕದಲ್ಲಿ ಶ್ರೀರಂಗನಾಯಕಿಯ ವರ್ಣನೆ ಬಹು ಸುಂದರವಾಗಿ ವರ್ಣಿತವಾಗಿದೆ.

ಮುಂದೆ ಆ ತಾಯಿಯನ್ನು ಕುರಿತು "ಸ್ವರೂಪಂ ಸ್ವಾತಂತ್ರ್ಯಂ ಭಗವತಿ ಇದಂ ಚಂದ್ರವದನೇ" ಎಂಬುದಾಗಿ ಸಂಬೋಧಿಸುವಾಗ ಪ್ರಾಜ್ಞರು ಪರಮಾತ್ಮನ ನಿರಂಕುಶ ಪ್ರಭುತ್ವ ಹಾಗೂ ದಿವ್ಯ ಸ್ವರೂಪ ಲಕ್ಷ್ಮಿಯ ಯೋಗಾತಿಶಯದಿಂದ ಉಂಟಾದುವು ಎಂಬುದಾಗಿ ಹೇಳಿದ್ದಾರೆ.

ಪುರುಷಕಾರ ಸ್ವರೂಪಳಾದ ಮಹಾಲಕ್ಷ್ಮಿ ಶ್ರೀಮನ್ನಾರಾಯಣನ್ನು ಒಂದು ಕ್ಷಣ ಬಿಟ್ಟಿರಲಾರಳು. ಶ್ರುತಿಯೂ ಕೂಡ ಭಗವಂತನನ್ನು ಲಕ್ಷ್ಮಿಯಿಂದ ಬೇರೆ ಮಾಡಿ ಹೇಳಿಲ್ಲ,

ರಾಘವತ್ವೇಽಭವತ್ಸೀತಾ
ರುಕ್ಮಿಣೀ ಕೃಷ್ಣ ಜನ್ಮನಿ
ಅನ್ಯೇಷು ಚಾವತಾರೇಷು
ವಿಷ್ಣೋ ರೇಷಾನಪಾಯಿನೀ
ದೇವತ್ವೇ ದೇವದೇಹೇಯಂ
ಮನುಷ್ಯತ್ವೇ ಚ ಮಾನುಷಾ
ವಿಷ್ಣೋ ರ್ದೇಹಾನು ರೂಪಾಂ ವೈ
ಕರೋತ್ಯೇಷಾತ್ಮನಸ್ತನುಂ
ಯಥಾ ಸರ್ವಗತೋ ವಿಷ್ಣುಃ
ತಥೈವೇಯಂ ದ್ವಿಜೋತ್ತಮ॥

# ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಆಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸ ಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ-517507
ಚಿತ್ತೂರು ಜಿಲ್ಲೆ, ಆಂ. ಪ್ರ.

ಎಂಬ ಶ್ರೀವಿಷ್ಣುಪುರಾಣದ ಈ ಶ್ಲೋಕ ಸರ್ವದಾ ಪ್ರಮಾಣ. ರಾಮನು ಅವತರಿಸಿದಾಗ ಸೀತೆಯಾಗಿ, ಕೃಷ್ಣನು ಬಂದಾಗ ರುಕ್ಮಿಣಿಯಾಗಿ ಬಂದಳು.

ಇಲ್ಲಿ ಸರ್ವಗತಃ ಎಂದರೆ ಶೇಷಶೇಷೀ ಭಾವವು. ಲಕ್ಷ್ಮಿ ಮೊದಲುಗೊಂಡು ಸಮಸ್ತ ಜೀವರಾಶಿಯವರೆಗೂ ಈಶ್ವರನಿಗೆ ಶೇಷವಾಗಿ ಇರುವುದರಿಂದಲೂ, ಇಲ್ಲಿ ಸ್ವಾಭಾವಿಕ ವಿಶೇಷತ್ವದ ಶೇಷತ್ವ ಅಂದರೆ ಸ್ವಾಮಿಯು ಲಕ್ಷ್ಮಿಯನ್ನು 'ನೀನು ನನಗೆ ಶೇಷಭೂತಳು' ಎಂಬುದಾಗಿ ಇಚ್ಛಿಸಿದಾಗ ಲಕ್ಷ್ಮಿಯು ಆತನ ಅಪೇಕ್ಷೆಯಂತೆ 'ನಾನು ನಿನಗೆ ಸರ್ವದಾಶೇಷಭೂತಳು' ಎಂಬ ಪರಮಪ್ರೇಮಸ್ವರೂಪದ ಸಂಬಂಧ. ಈಶ್ವರನೊಬ್ಬನಿಗೇ ಪರಮ ಶೇಷಿತ್ವವು ನಿಶ್ಚಯಿಸಲ್ಪಟ್ಟಿರುವುದರಿಂದ "ದಾಸಭೂತಾಃ ಸ್ವತಃ ಸರ್ವೇ ಹ್ಯಾತ್ಮಾನಃ ಪರಮಾತ್ಮಾನಂ" ಎಂಬ ಪ್ರಮಾಣದಿಂದಲೂ ಪರಮಾತ್ಮನಿಗೆ ಪ್ರತಿಯೊಬ್ಬರೂ ಶೇಷತ್ವವನ್ನು ಹೊಂದುವರು. ಆದರೂ ಭಗವಂತನನ್ನು–ಮಂಗಳಂ ಭಗವಾನ್ ವಿಷ್ಣುಃ, ಮಂಗಳಂ ಗರುಡಧ್ವಜಃ, ಶ್ರೀಮನ್ನಾರಾಯಣ–ಇತ್ಯಾದಿಗಳಿಂದ ನುತಿಸುವಾಗ ಶ್ರೀ ಶಬ್ದದಿಂದ ಆವನನ್ನು ಹಾಡುವಾಗ ಮಾತ್ರ ಅವನಿಗೆ ಹಿರಿಮೆ. ಮಂಗಳ ಶಬ್ದವಾದರೋ ಲಕ್ಷ್ಮಿಗೆ ಸ್ವತಃ ಪ್ರಾಪ್ತವಾಗಿದೆ. ಸ್ವಯಂ ಮಂಗಳಕರಳು ಆಕೆ.

ಪ್ರಪಂಚದಲ್ಲಿ ಪರಿಮಳವನ್ನು ಬೀರುವ ಪುಷ್ಪವು ಅದರ ಸುವಾಸನೆಯಿಂದ ಪರಿಮಳವಾಗಿದೆ ಎಂಬುದಾಗಿ ಹೊಗಳುವುದಿಲ್ಲ. ಅಂತೆಯೇ ಸ್ವಯಂ ಮಂಗಳಕರಳಾದ ಲಕ್ಷ್ಮಿಯ ಸಂಬಂಧದಿಂದ ಶ್ರೀಮನ್ನಾರಾಯಣನಿಗೆ ಅನಂತಾನಂತ ಗುಣಗಳು ಬಂದಿವೆ. ಏಕೆಂದರೆ ಮಹಾಲಕ್ಷ್ಮಿಯು ಶ್ರೀಮನ್ನಾರಾಯಣನಿಗೆ ಸ್ವಾಭಾವಿಕವಾದ ಶೇಷಭೂತಳು. ಆದರೂ ಸ್ವರೂಪರೂಪಗುಣಗಳಲ್ಲಿ ಇಬ್ಬರೂ ಸರಿಸಮಾನರು.

ಅಪಿ ಪರಿಮಳಃ ಕಾನ್ತಿ
ಲಾವಣ್ಯಂ ಅರ್ಚಿರಿತೀಂದಿರೇ
ತವ ಭಗವತಶ್ಚೈತೇ
ಸಾಧಾರಣಾ ಗುಣರಾಶಯಃ

ಆ ದಿವ್ಯ ದಂಪತಿಗಳು ಅನ್ಯೋನ್ಯ ಪ್ರೇಮ ಭಾವ, ಪರಸ್ಪರ ಅನುರಾಗ ಹಾಗೂ ಹೊಂದಾಣಿಕೆ ಕುರಿತ ಈ ಸುಂದರ ಶ್ಲೋಕ ಸರ್ವದಾ ಮಾನವ ಪ್ರಪಂಚಕ್ಕೆ ದಾರಿದೀಪ.

ಅನ್ಯೇಽಪಿ ಯೌವನಮುಖಾ
ಯುವಯೋಃ ಸಮಾನಾಃ
ಶ್ರೀರಂಗ ಮಂಗಲ
ವಿಜ್ರಂಭಣ ವೈಜಯಂತೀ
ತಸ್ಮಿನ್ ಸ್ತವ ತ್ವಯಿ ಚ
ತಸ್ಯ ಪರಸ್ಪರೇಣ
ವಿಸ್ತೀರ್ಯ ದರ್ಪಣ
ಇವ ಪ್ರಚುರಂ ಸ್ವದಂತೇ ॥

ಶ್ರೀರಂಗಮಂಗಲವನ್ನು ಹೆಚ್ಚಿಸುವ ಮಹಾಲಕ್ಷ್ಮಿಯೇ, ಯೌವನ ಮುಂತಾದ ಗುಣಗಳಲ್ಲಿ ದಿವ್ಯ ದಂಪತಿಗಳಾದ ನಿಮ್ಮಿಬ್ಬರಲ್ಲಿ ಸರಿಸಮಾನವಾಗಿರುವುದರಿಂದ ನಿನ್ನ ಗುಣಗಳು ಆ ಮಹಾವಿಷ್ಣುವಿನಲ್ಲೂ, ಆತನ ಗುಣಗಳು ನಿನ್ನಲ್ಲೂ ಇರುವುದರಿಂದ ಕನ್ನಡಿಯಲ್ಲಿ ತಮ್ಮ ಮುಖ ಸೌಂದರ್ಯವನ್ನು ಕಂಡು ಆನಂದಪಡುವಂತೆ ಒಬ್ಬರ ಗುಣವನ್ನು ಮತ್ತೊಬ್ಬರಲ್ಲಿ ಕಂಡು ಆನಂದಪಡುವಿರಿ.

ಸ್ತ್ರೀ ರೂಪ ಹಾಗೂ ಅವರ ಸೌಂದರ್ಯವನ್ನು ಆತ್ಮದೃಷ್ಟಿಯಿಂದ ನೋಡಿ ಆನಂದ ಪಡಬೇಕು. ಕಾಮದ ದೃಷ್ಟಿಯಿಂದಲೂ ಮೋಹದ ದೃಷ್ಟಿಯಿಂದ ನೋಡಬಾರದು. ಜ್ಞಾನ, ತಪಸ್ಸು, ತ್ಯಾಗ ಬಲಿದಾನಗಳ ಮೇಲೆ ನಿಂತ ಪ್ರೇಮ ಸರ್ವತೋಮುಖವಾದ ಆನಂದವನ್ನು ನೀಡುತ್ತದೆ. ಶೃಂಗಾರ ರಸವಿಲ್ಲದ ವೇದಾಂತಾನುಭವವಿಲ್ಲ. ಗೋಪಿಯರು, ಗೊಲ್ಲರು, ಋಷಿಪುಂಗವರು ಸ್ತ್ರೀ ಭಾವದಿಂದ ಪರಮಾತ್ಮನನ್ನು ಅನುಭವಿಸಿದ್ದಾರೆ. ಶ್ರುತಿಸ್ಮೃತಿ ಪುರಾಣಗಳಲ್ಲಿ ಇವಕ್ಕೆ ಪ್ರಮಾಣ.

"ಸ್ತ್ರೀ ಭಾವಮೇವ
ಮನಸಾ ಬಿಭರಾಂ ಬಭೂವುಃ"
"ಭವತಿ ಆತ್ಮನಸ್ತು ಕಾಮಾಯ"
"ರಸೋ ವೈ ಸಃ ರಸಂ ಹ್ಯೇವಾಯಂ
ಲಬ್ಧ್ವಾ ಆನಂದೀ ಭವತಿ"
"ನಂದಾಮಿ ಪಶ್ಯನ್ನಪಿ ದರ್ಶನೇನ
ಭವಾಮಿ ದೃಷ್ಟ್ವಾ ಚ ಪುನರ್ಯುವೇವ"

ಚೇತನನು ಎಲ್ಲಾ ವಿದಗಳಲ್ಲಿಯೂ ಪರಮಾತ್ಮನಿಗೆ ಪರತಂತ್ರರೆಂಬ ಭಾವಕ್ಕೆ ಪುಷ್ಟಿ ದೊರೆತು ಪಡೆಯುವ ಆನಂದ ಮಹದಾನಂದ.

ಭಟ್ಟರವರು 35ನೆಯ ಶ್ಲೋಕದಲ್ಲಿ–

ಘನ, ಕನಕದ್ಯುತೀ
ಯುವದಶಾಮಪಿ ಮುಗ್ಧ ದಶಾಂ ।
ಯುವ ತರುಣತ್ವಯೋ
ರುಚಿತ ಮಾಭರಣಾದಿ ಪರಂ ।
ಧ್ರುವಂ ಅಸಮಾನದೇಶ
ವಿನಿವೇಶಿ ವಿಭಜ್ಯ ಹತಾ।
ತ್ವಯಿ ಚ ಕುಶೇಶಯೋದರ
ವಿಹಾರಿಣಿ ನಿರ್ವಿಶಸಿ ॥

(24ನೇ ಪುಟ ನೋಡಿ)

## ಕಿಶೋರಜಗತ್



# ನಾರದ ಭಕ್ತಿ

ತ್ರಿಲೋಕ ಸಂಚಾರಿಯಾದ ನಾರದರಿಗೆ ತನ್ನನ್ನು ಮೀರಿಸುವ ಭಕ್ತರು ಯಾರೂ ಇಲ್ಲ ಎಂಬ ಗರ್ವ. ಇವನ ಗರ್ವ ಮುರಿಯ ಬೇಕೆಂದು ಶ್ರೀಮನ್ನಾರಾಯಣ ಸಮಯ ಕಾಯುತ್ತಿದ್ದ.

ಒಂದು ದಿನ ಶ್ರೀಮನ್ನಾರಾಯಣನು ನಾರದನನ್ನು ಕರೆದು 'ನನ್ನ ಪರಮಭಕ್ತ ರೈತನೊಬ್ಬ ಭೂಲೋಕದಲ್ಲಿದ್ದಾನೆ. ಅವನ ಯೋಗ ಕ್ಷೇಮವನ್ನು ವಿಚಾರಿಸಿ ಕೊಂಡು ಬಾ' ಎಂದನು. ಆಗ ನಾರದನು ಅವನು ನನಗಿಂತಲೂ ಶ್ರೇಷ್ಠನಾದ ಭಕ್ತನೇ ಎಂದು ಪ್ರಶ್ನಿಸಿದನು. "ನೀನು ಭೂಲೋಕಕ್ಕೆ ಹೋಗಿ ಅವನನ್ನು ನೋಡಿ ಕೊಂಡು ಬಾ. ಆಗ ನಿನಗೆ ಗೊತ್ತಾಗುತ್ತದೆ. ಅವನು ನಿನಗಿಂತ ಶ್ರೇಷ್ಠನಾದ ಭಕ್ತನು ಹೌದೆ ಅಲ್ಲವೇ ಎಂಬುದು" ಎಂದು ಶ್ರೀಮನ್ನಾರಾಯಣ ಎಂದನು. ನಾರದನು ಆಜ್ಞೆಯನ್ನು ಶಿರಸಾವಹಿಸಿ ಭೂಲೋಕಕ್ಕೆ ಬಂದನು.

ಇತ್ತ ದೇವರ ಪರಮಭಕ್ತ ರೈತನು ಬೆಳಗ್ಗೆ ಎದ್ದು ಒಂದುಬಾರಿ 'ಶ್ರೀಹರಿನಾರಾಯಣ' ಎಂದು ಧ್ಯಾನಿಸಿ ತನ್ನ ಗದ್ದೆಗೆ ಹೊರಟು, ಗದ್ದೆ ಉಳಲು ಆರಂಭಿಸಿದನು. ಮಧ್ಯಾಹ್ನವಾಯಿತು. ಕೈ ಕಾಲು ಮುಖ ತೊಳೆದು ಇನ್ನೊಮ್ಮೆ 'ಶ್ರೀಹರಿನಾರಾಯಣಾ'ಎಂದು ಪ್ರಾರ್ಥಿಸಿ ತನ್ನ ಊಟ ಮುಗಿಸಿದನು. ಮತ್ತೆ ತನ್ನ ಕಾಯಕವನ್ನು ಮುಂದುವರಿಸಿದನು. ಸಂಜೆಯಾಯಿತು. ಎತ್ತುಗಳನ್ನು ಕೊಟ್ಟಿಗೆಯಲ್ಲಿ ಕಟ್ಟಿ ಕೈ ಕಾಲು ಮುಖ ತೊಳೆದು ಮತ್ತೊಮ್ಮೆ 'ಶ್ರೀಹರಿನಾರಾಯಣ' ಎಂದು ಮನದಲ್ಲಿ ಧ್ಯಾನಿಸಿ ತನ್ನ ದಿನಚರಿಯನ್ನು ಮುಗಿಸಿ ಸುಖನಿದ್ರೆಯನ್ನು ಮಾಡಿದನು.

ಇದನ್ನೆಲ್ಲಾ ದೂರದಿಂದಲೇ ಗಮನಿಸಿದ ನಾರದನಿಗೆ ಏನೂ ವಿಶೇಷ ಕಾಣಲಿಲ್ಲ. ತಾನು ಕಂಡದನ್ನೆಲ್ಲಾ ಶ್ರೀಹರಿಗೆ ವರದಿ ಒಪ್ಪಿಸಿದ. ನಾನು ದಿವಸಕ್ಕೆ ಸಾವಿರಾರು ಬಾರಿ ನಿನ್ನ ನಾಮಸ್ಮರಣೆ ಮಾಡುತ್ತಿರುವಾಗ, ಆ ರೈತನು ದಿವಸಕ್ಕೆ ಮೂರು ಬಾರಿ ಮಾತ್ರ ನಿನ್ನ ನಾಮಸ್ಮರಣೆ ಮಾಡುತ್ತಾನೆ. ಅವನು ನನಗಿಂತ ಹೇಗೆ ಶ್ರೇಷ್ಠನಾಗುತ್ತಾನೆ, ಎಂದು ಸಂದೇಹವನ್ನು ಮುಂದಿಟ್ಟ. ಅದಕ್ಕೆ ಶ್ರೀಹರಿಯು ನಗುತ್ತಾ "ನಾನೊಂದು ಎಣ್ಣೆ ತುಂಬಿದ ಬಟ್ಟಲನ್ನು ಕೊಡುತ್ತೇನೆ, ಅದನ್ನು ನೀನು ತಲೆಮೇಲೆ ಜಾಗ್ರತೆಯಾಗಿ ಇಟ್ಟುಕೊಂಡು ಇಡೀ ಪ್ರಪಂಚಕ್ಕೆ ಪ್ರದಕ್ಷಿಣೆ ಹಾಕಿ ಬರಬೇಕು. ಆದರೇ ಒಂದು ಶರತ್ತು—ಎಲ್ಲಿಯೂ ಒಂದು ತೊಟ್ಟು ಎಣ್ಣೆ ಕೆಳಕ್ಕೆ ಚೆಲ್ಲಬಾರದು" ಎಂದು ಹೇಳಿ ಎಣ್ಣೆ ತುಂಬಿದ ಬಟ್ಟಲನ್ನು ನಾರದನ ಕೈಗಿತ್ತನು.

ನಾರದನು ಶ್ರೀಹರಿ ತಿಳಿಸಿದಂತೆ ಎಣ್ಣೆ ತುಂಬಿದ ಬಟ್ಟಲನ್ನು ತಲೆಮೇಲೆ ಜಾಗ್ರತೆಯಾಗಿ ಇಟ್ಟುಕೊಂಡು ಚಿತ್ತವಂತೆ ಒಂದು ಚೂರೂ ಎಣ್ಣೆ ಚೆಲ್ಲದಂತೆ ಭೂಪ್ರದಕ್ಷಿಣೆ ಗೈದು ಶ್ರೀಹರಿಯ ಮುಂದೆ ಆ ಎಣ್ಣೆ ತುಂಬಿದ ಬಟ್ಟಲನ್ನು ಇರಿಸಿ ನಿಟ್ಟುಸಿರು ಬಿಟ್ಟನು.

ಆಗ ನಾರಾಯಣನು "ನೀನು ಭೂ ಪ್ರದಕ್ಷಿಣೆ ಮಾಡುವಾಗ ಎಷ್ಟುಬಾರಿ ನನ್ನಧ್ಯಾನ ಮಾಡಿದೆ" ಎಂದು ನಾರದನನ್ನು ಕೇಳಿದಾಗ, ನಾರದನು, "ದೇವಾ ಈ ಎಣ್ಣೆ ತುಂಬಿದ ಬಟ್ಟಲು ತಲೆ ಮೇಲಿರುವಾಗ, ಅದೂ ಎಣ್ಣೆ ಸ್ವಲ್ಪವೂ ಚೆಲ್ಲದಂತೆ ಜಾಗ್ರತೆ ವಹಿಸಿರುವಾಗ ನಿನ್ನ ಧ್ಯಾನ ಮಾಡಲು ಸಮಯವೆ ಎಲ್ಲಿದೆ. ನೆನಪಾದರೂ ಹೇಗೆ ಬರುತ್ತದೆ" ಎಂದು ಉತ್ತರವಿತ್ತನು. ಆಗ ಶ್ರೀಹರಿಯು ನಗುತ್ತಾ "ನೀನು ನಾನು ಹೇಳಿದಂತೆ ಇಡೀ ಪ್ರಪಂಚ ಪ್ರದಕ್ಷಿಣೆಗೈದರೂ ಒಮ್ಮೆ ಯಾದರೂ ನನ್ನ ನೆನಪು ಬರಲಿಲ್ಲ. ಆ ಬಡ ರೈತನಾದರೋ ತನ್ನ ಕಷ್ಟ ಕಾರ್ಪಣ್ಯಗಳ ನಡುವೆಯೂ ದಿನಕ್ಕೆ ಮೂರು ಬಾರಿ ಯಾದರೂ ನೆನಪು ಮಾಡಿಕೊಳುತ್ತಾ ಮೈ ಮುರಿದು ದುಡಿದು ಬದುಕುತ್ತಾನೆ. ಈಗಲಾದರೂ ಯಾರು ಪರಮಭಕ್ತರು ಎಂಬುದು ತಿಳಿಯಿತೇ? ಆ ಬಡ ರೈತನೇ ನನ್ನ ಶ್ರೇಷ್ಠಭಕ್ತ" ಎಂದಾಗ ನಾರದ ನಾಚಿಕೆಯಿಂದ ತಲೆ ತಗ್ಗಿಸಿದ. •

**ಶ್ರೀ ಗಂಗಾಧರ ಮಟ್ಟಿ**

---

ಯಾರು ಗತಿ ಇನ್ಯಾರು ಗತಿ ನನಗೆ ನಿಮ್ಮ ಬಿಟ್ಟರೆ ॥ ಪ ॥

ಅಡೆತಡೆಗಳ ಹೊಡೆದೋಡಿಸುವ ಗಣಪತಿಯೆ
ತಂದೆ–ತಾಯಿಯರಲಿ ಜಗವ ಕಂಡವನೇ
ಮೊದಲ ಪೂಜೆ ನಿನಗಲ್ಲವೇ ವಿನಾಯಕ
ಎಲ್ಲರ ಕಾಯುವ ಹೊಣೆ ನಿನ್ನದು ಗಣೇಶ ॥ ೧ ॥

ನಂಜನಗೂಡ ನಂಜುಂಡೇಶ್ವರ
ಎನ್ನನು ಪೊರೆಯೋ ಶ್ರೀಕಂಠೇಶ್ವರ
ಮಹಿಷ ಮರ್ದಿನಿ ಶ್ರೀ ಚಾಮುಂಡೇಶ್ವರಿ
ನಿನ್ನ ಬಿಟ್ಟನ್ಯರನರಿಯೆ, ತಾಯೆ, ಕಾಯೆ. ॥ ೨ ॥

ಆರುಮುಖದವನೆ ಶ್ರೀ ಸುಬ್ರಹ್ಮಣ್ಯ
ಏಳುಮಲೆವಾಸ ಶ್ರೀ ವೆಂಕಟೇಶ್ವರ
ಮಂತ್ರಾಲಯ ನಿವಾಸಿ ಶ್ರೀ ರಾಘವೇಂದ್ರ
ಈ ಜಗವ ರಕ್ಷಿಸುವರು ನೀವೇ ಅಲ್ಲವೆ! ॥ ೩ ॥

—ಎಸ್. ಬಾಲಸುಬ್ರಹ್ಮಣ್ಯಂ

ಗೃಹಲಕ್ಷ್ಮಿ

# ಮಹಾಸತಿ ಅನಸೂಯೆ

ವೇದಕಾಲದ ನಂತರ ಪುರಾಣ, ಮಹಾಕಾವ್ಯಗಳ ಯುಗಕ್ಕೆ ಪ್ರವೇಶಿಸಿದಾಗ ಅನೇಕ ತಪಸ್ವಿನಿಯರ ಉಲ್ಲೇಖ ಸಿಗುತ್ತದೆ. ಈ ತಪಸ್ವಿನಿಯರು ತಮ್ಮ ತಪಃಶಕ್ತಿಗಾಗಿ ಪ್ರಖ್ಯಾತರಾದವರು. ಮಹರ್ಷಿಗಳ ಪತ್ನಿಯರಾದ ಇವರುಗಳು ತಮ್ಮ ತೇಜಸ್ಸಿನಿಂದ ತಮ್ಮ ಆದರ್ಶ ನಡೆನುಡಿಗಳಿಂದ ಎಂದಿಗೂ ಪೂಜನೀಯರಾಗಿದ್ದಾರೆ. ಅವರ ಪಾವನ ಚರಿತ್ರೆಗಳನ್ನು ಅರಿಯುವುದೇ ಪುಣ್ಯದಾಯಕವಾದ ಸಂಗತಿಯಾಗಿದೆ. ಈ ಮಹಾ ತಪಸ್ವಿನಿಯರ ಪಂಕ್ತಿಯಲ್ಲಿ ಅಗ್ರಪೂಜೆಗೆ ಅರ್ಹ ಆದವಳು ಮಹಾಸತಿ ಅನಸೂಯೆ.

ಅಸೂಯೆ ಇಲ್ಲದವಳು ಅನಸೂಯೆ. ಅಸೂಯೆ ಬಹಳ ಕೆಟ್ಟ ಗುಣ. ಎಂತಹವರನ್ನೂ ಅಸೂಯೆ ಹಾಳು ಮಾಡಿಬಿಡುತ್ತದೆ. ಅಸೂಯೆಯಂತಹ ಕೆಟ್ಟಗುಣ ಇಲ್ಲದಿರುವುದು ಬಹಳ ಅಪರೂಪ. ಕಣ್ಣಿಗೆ ಎಣ್ಣೆ ಹಾಕಿಕೊಂಡು ಅಂತಹ ಅಸೂಯಾರಹಿತರನ್ನು ಹುಡುಕಬೇಕು. ಮಾನವ–ದೇವ–ದಾನವರಲ್ಲಿ ಎಲ್ಲೋ ಅಪರೂಪವಾಗಿ ಅಂತಹವರು ದೊರೆಯುತ್ತಾರೆ. ಅದಕ್ಕೆ ಹಿಂದಿನವರು ಉಕ್ತಿಯೊಂದನ್ನು ನುಡಿದಿದ್ದಾರೆ. ಇನ್ನೊಬ್ಬರ ಗುಣವನ್ನು ಕಂಡು ಮತ್ಸರಿಸುವುದು ಸಹಜ. ಆದರೆ ತಾನು ಗುಣವಂತನಾಗಿಯೂ ಇನ್ನೊಬ್ಬರಲ್ಲಿ ಇರುವ ಗುಣವನ್ನು ಮೆಚ್ಚುವಂತಹವನೂ ಆದ ವಿದ್ವಾಂಸರು ಲೋಕದಲ್ಲಿ ಸಿಗುವುದು ಅಪರೂಪ ಎಂದು.

ನಾಗುಣೀ ಗುಣಿನಂ ವೇತ್ತಿ  
ಗುಣೀ ಗುಣಿಷ್ವಮತ್ಸರಿ  
ಗುಣೀ ಚ ಗುಣರಾಗೀ ಚ  
ವಿರಲಃ ಸರಲೋ ಜನಃ ॥

ಆದರೆ, ಅನಸೂಯೆ ಮಹಾಸಾಧ್ವಿ, ಮಹಾ ಪತಿವ್ರತೆ. ಆಕೆಯಲ್ಲಿ ಈರ್ಷ್ಯೆ, ದ್ವೇಷ, ಕ್ರೋಧ ಮುಂತಾದ ಮನೋವಿಕಾರಗಳಿಗೆ ಎಡೆಯೇ ಇರಲಿಲ್ಲ. ಆಕೆಯ ಶಾಂತ–ಸೌಹಾರ್ದ ಸ್ವಭಾವವನ್ನು ಮೊದಲೇ ಗುರುತಿಸಿದಂತೆ ದೇವಹೂತಿ–ಕರ್ದಮರು 'ಅನಸೂಯ' ಎಂದು ನಾಮಕರಣವನ್ನು ಮಾಡಿದ್ದರೇನೋ!

ಬ್ರಹ್ಮನ ವಂಶಜನಾದ ಮಹರ್ಷಿ ಅತ್ರಿಯ ಪತ್ನಿಯಾದ ಅನಸೂಯೆಯ ತಪಃಶಕ್ತಿ ಅಪಾರವಾದುದು. ತನ್ನ ಶಕ್ತಿಯ ಕಾರಣ ಪಾತಿವ್ರತ್ಯದ ಕಾರಣ ಅನಸೂಯ 'ಮಹಾಸತಿ ಅನಸೂಯ' ಎಂದೇ ಖ್ಯಾತಳಾಗಿದ್ದಳು.

ಪ್ರಾರಂಭಕ್ಕೆ 'ವಿಷ್ಣುಪುರಾಣ'ದಲ್ಲಿ ಅನಸೂಯೆಯ ಪ್ರಸ್ತಾಪ ಬರುತ್ತದೆ. ಆಕೆ ನಡೆಸಿದ ಅನೇಕ ಘಟನೆಗಳು ಸಾಂಕೇತಿಕವಾಗಿ, ಪ್ರತಿಮಾರೂಪದಲ್ಲಿ ಬಹು ಅರ್ಥಗರ್ಭಿತವಾಗಿವೆ.

ಒಮ್ಮೆ ಎಲ್ಲಾಕಡೆಗೂ ಮಳೆಯಾಗದೆ ಪೈರು ಪಚ್ಚೆಗಳೆಲ್ಲಾ ಒಣಗಿಹೋದುವು. ಗಿಡ–ಮರ–ಬಳ್ಳಿಗಳ ಕಾಯಿ–ಹೂ–ಹಣ್ಣು–ಎಲೆಗಳೆಲ್ಲವೂ ಒಣಗಿಹೋದವು. ಪಯಸ್ವಿನಿಯಂತಿದ್ದ ಗಂಗಾನದಿ ಬತ್ತಿಹೋಯಿತು. ಎಲ್ಲೆಲ್ಲೂ ನೀರಿಗೆ ಹಾಹಾಕಾರ, ಭೀಕರ ಕ್ಷಾಮವೇ ತಲೆದೋರಿತು. ಜಗತ್ತೇ ತಲ್ಲಣಗೊಂಡಿತು. ಅಂತಹ ಸ್ಥಿತಿಯಲ್ಲಿ ಮಳೆಯಾಗದೆ ಬೆಳೆಯಾಗದೆ ಹತ್ತು ವರ್ಷಗಳು ಬಹಳ ದುಃಸ್ಥಿತಿ ಒದಗಿತಂತೆ! ದೇವತೆಗಳು ಬೇರೆ ದಾರಿಕಾಣದೆ ಅತ್ರಿಯ ಪತ್ನಿ ಅನಸೂಯೆಯನ್ನು ಪ್ರಾರ್ಥಿಸಿದರಂತೆ. ದೇವತೆಗಳ ಪ್ರಾರ್ಥನೆಗೆ ಓಗೊಟ್ಟಳು ಅನಸೂಯೆ. ಸಕಲ ಜೀವಜಂತುಗಳಲ್ಲಿ ಕನಿಕರವುಳ್ಳ ಆಕೆ ತನ್ನ ತಪಃಶಕ್ತಿಯ ಪ್ರಭಾವದಿಂದ ಗಂಗಾನದಿಯಲ್ಲಿ ಮತ್ತೆ ನೀರು ಹರಿಯುವಂತೆ ಮಾಡಿದಳು. ಪಶು–ಪಕ್ಷಿ–ಪ್ರಾಣಿಗಳಿಗೆ, ಗಿಡ–ಮರಗಳಿಗೆ ಚೈತನ್ಯ ನೀಡಿದಳು. ಎಲ್ಲಾ ಜೀವ ಜಂತುಗಳೂ ನೀರಿನಿಂದ ತೃಪ್ತವಾದವು. ಅನಸೂಯೆ ದೇವತೆಗಳ ಪ್ರಾರ್ಥನೆಯಂತೆ ಹತ್ತು ದಿನಗಳನ್ನು ಹತ್ತು ರಾತ್ರಿಗಳನ್ನಾಗಿ ಪರಿವರ್ತಿಸಿದಳು ಎಂದು ಒಂದು ಕಥೆ ತಿಳಿಸುತ್ತದೆ.

ಮನುಷ್ಯನಲ್ಲಿ ಸ್ವಾರ್ಥಭಾವನೆ ಕಡಿಮೆಯಾಗಿ ಪರೋಪಕಾರ ಭಾವನೆ ಮೂಡಬೇಕು. ಪರೋಪಕಾರಕ್ಕಾಗಿ ಏನನ್ನು ಬೇಕಾದರೂ ಮಾಡಲು ತಯಾರಾದ ಅನಸೂಯೆ ತನ್ನ ಹಿರಿಯರಿಂದ ಪಡೆದುಕೊಂಡ ಉತ್ತಮ ಗುಣ ತ್ಯಾಗಶೀಲತೆ. ಇಂತಹ ಮನನೀಯವಾದ ಆದರ್ಶಗುಣಕ್ಕಾಗಿ ಆಕೆ ಪ್ರಖ್ಯಾತಳಾಗಿದ್ದಾಳೆ.

ತ್ಯಾಗಶೀಲದಂತೆಯೇ ಅತಿಥಿ ಸತ್ಕಾರವೂ ಪ್ರಾಚೀನರಲ್ಲಿ ಪ್ರಧಾನ ಪಾತ್ರ ವಹಿಸಿದ್ದಿತು.

ಅನಸೂಯೆ ಅತಿಥಿ ಸತ್ಕಾರಕ್ಕೂ ಹೆಸರುವಾಸಿಯಾದವಳು. ವಾಲ್ಮೀಕಿ ರಾಮಾಯಣದ ಅಯೋಧ್ಯಾಕಾಂಡದ ಹಲವು ಶ್ಲೋಕಗಳಲ್ಲಿ ಅನಸೂಯೆಯ ಪ್ರಸ್ತಾಪ ಬರುತ್ತದೆ. ರಾಮ–ಸೀತೆ–ಲಕ್ಷ್ಮಣರು ವನವನ್ನು ಪ್ರವೇಶಿಸಿ ಮುಂದುವರಿಯುತ್ತಿರುವಾಗ ಅತ್ರಿಮಹರ್ಷಿಯ ಆಶ್ರಮ ಮಾರ್ಗಮಧ್ಯೆ ಸಿಗುತ್ತದೆ.

ರಾಮ–ಸೀತೆ–ಲಕ್ಷ್ಮಣರು ಆಶ್ರಮವನ್ನು ಪ್ರವೇಶಿಸಿ ಗುರು, ಹಿರಿಯರಿಗೆ ವಂದಿಸುತ್ತಾರೆ. ಅವರ ಆಶೀರ್ವಾದವನ್ನು ಪಡೆದುಕೊಳ್ಳುತ್ತಾರೆ. ಇಲ್ಲಿ ಅನಸೂಯೆ ಸೀತೆಯನ್ನು ಬಹಳ ಚೆನ್ನಾಗಿ ಕಂಡಳು. ವೃದ್ಧೆಯಾದ ಅನಸೂಯೆ ಸೀತೆಯನ್ನು ಪ್ರತ್ಯೇಕವಾಗಿ ಕರೆದೊಯ್ದು ಸತ್ಕರಿಸುತ್ತಾಳೆ. ಹಿರಿಯಳೂ, ಜ್ಞಾನಿಯೂ ಆದ ಅವಳು ಸೀತೆಗೆ ಪತಿವ್ರತಾಧರ್ಮವನ್ನುಪದೇಶಿಸುವಾಗ ಅಲಂಕಾರ ಮಾಡಿಕೊಳ್ಳುವ ವಿಧಾನವನ್ನೂ ತಿಳಿಸುತ್ತಾಳೆ. ಪತಿ ಎಂತಹವನಾದರೂ ಅವನನ್ನು ಸತಿ ಅನುಸರಿಸಬೇಕು. ಸೀತೆಯ ಕಥೆ ವೃದ್ಧೆಗೆ ಗೊತ್ತಿಲ್ಲವೆಂದಿಲ್ಲ, ಸೀತಾದೇವಿ ತನ್ನ ಕಥೆಯೆಲ್ಲವನ್ನೂ ಅನಸೂಯೆಗೆ ಹೇಳುತ್ತಾಳೆ. ಸೀತೆಯ ವಾಕ್ಯಗಳಿಂದ ತೃಪ್ತಳಾದ ಅನಸೂಯೆಯು "ನೀನು ಎಷ್ಟು ಚೆನ್ನಾಗಿ ಮಾತನಾಡುವೆ, ಸಾಯಂಕಾಲವಾಗಿದೆ, ನೀನು ಇನ್ನು ರಾಮನ ಬಳಿಗೆ ಹೋಗು" ಎಂದು ಹೇಳುತ್ತಾಳೆ. ಆದರೆ ರಾಮನ ಹತ್ತಿರಕ್ಕೆ ತರುಣಿ ಅಲಂಕಾರವಿಲ್ಲದೆ ಹೋಗಬಾರದು. ತನ್ನ ಮನಸ್ಸಿನ ಆಸೆ ವೃದ್ಧೆ ಕಾರ್ಯಗತಗೊಳಿಸುತ್ತಾಳೆ. ಅದರಲ್ಲೂ ಸೀತೆ ತನ್ನೆದುರಿನಲ್ಲೇ ಚೆನ್ನಾಗಿ ಅಲಂಕಾರ ಮಾಡಿಕೊಂಡು ಹೋಗಬೇಕೆಂದು ಅನಸೂಯೆಯ ಬಯಕೆ. ಅದರಿಂದ ಹೇಳುತ್ತಾಳೆ.

ಅಲಂಕುರು ಚ ತಾವತ್ತ್ವಂ  
ಪ್ರತ್ಯಕ್ಷಂ ಮಮ ಮೈಥಿಲಿ ।  
ಪ್ರೀತಿಂ ಜನಯ ಮೇ ವತ್ಸೇ  
ದಿವ್ಯಾಲಂಕಾರ ಶೋಭಿತಾ ॥

ದಿವ್ಯಾಲಂಕಾರಗಳಿಂದ ಸೀತೆ ಶೋಭಿಸಬೇಕೆಂಬ ಬಯಕೆ ಅನಸೂಯೆಯದು. ದತ್ತಾತ್ರೇಯನ ಮಾತೆಯಾದ ಅನಸೂಯೆ ಇನ್ನೊಬ್ಬರು ಸುಖವಾಗಿರುವುದನ್ನು ಕಾಣಬಯಸುವವಳು. ಈ ದೇವಿ ಸ್ವರೂಪಳಾದ ಸ್ತ್ರೀತಾಪಸಿಯು ಪರರ ಸುಖದಲ್ಲಿ ತನ್ನ ಸುಖವನ್ನು ನೆನಪಿಗೆ ತಂದುಕೊಳ್ಳುತ್ತಾಳೆ. ಅತ್ರಿ ಮಹರ್ಷಿಗೆ ತಕ್ಕ ಸಮಯಕ್ಕೆ ಬೇಕಾದ್ದನ್ನು ಒದಗಿಸುತ್ತಾ ಪತಿವ್ರತಾಧರ್ಮದ ಹಂತಗಳನ್ನು ಅನುಸರಿಸಿ ನಡೆದ ಅನಸೂಯೆ ಜನಮನದಲ್ಲಿ ಶಾಶ್ವತವಾದ ಸ್ಥಾನವನ್ನು ಗಳಿಸಿಕೊಂಡಿದ್ದಾಳೆ. ಅನಸೂಯೆಯ ಆದರ್ಶಗುಣಗಳು ಕಾಲಕ್ಕೂ ನಿದರ್ಶನರೂಪವಾದುದಾಗಿವೆ.

ಶ್ರೀ ಕೆ. ರಮಾನಂದ

ಯುವವಾಣಿ

# ರಾಮಕೃಷ್ಣ - ವಿವೇಕಾನಂದರು

ಬಂಗಾಲದ ಹೂಗ್ಲಿ ಜಿಲ್ಲೆಯ ಕಾಮಾರ ಪುಕುರವೆಂಬ ಸಣ್ಣ ಗ್ರಾಮದಲ್ಲಿ ಸಾಂಪ್ರದಾಯಿಕ ಬ್ರಾಹ್ಮಣ ಕುಟುಂಬದ ಖುದಿರಾಮ ಚಟ್ಟೋಪಾಧ್ಯಾಯ ಎಂಬುವವರಿಗೂ, ಅವರ ಧರ್ಮ ಪತ್ನಿ ಚಂದ್ರಮಣೀದೇವಿಯವರಿಗೂ, ಗಯೆಗೆ ಹೋಗಿದ್ದಾಗ ಅಪೂರ್ವ ಕನಸುಗಳು ಕಂಡು ಬಂದು, ಲೋಕಕಲ್ಯಾಣಾರ್ಥವಾಗಿ ಒಬ್ಬ ಮಹಾತ್ಮನ ಅವತಾರ ಅವರ ಮನೆಯಲ್ಲಾಗುವುದೆಂದು ಹಿಗ್ಗಿದರು. ಮುಂದೆ ಮಹಾಸಮನ್ವಯ ಸಂದೇಶದಿಂದ ಜಗತ್ತನ್ನು ಜಾಗೃತಗೊಳಿಸಿದ ಲೋಕಪೂಜ್ಯನೂ ಯುಗಾವತಾರನೂ ಆದ ಶ್ರೀರಾಮಕೃಷ್ಣನ ಅವತಾರ ಕ್ರಿ. ಶ. 18 6 ನೇ ಫೆಬ್ರವರಿ 18 ನೇ ಶುದಿ ಫಾಲ್ಗುಣ ಮಾಸದ ಬೆಳಗ್ಗೆ ಈ ಕಾಮಾರಪುಕುರದ ಹುಲ್ಲು ಜೋಪಡಿಯಲ್ಲಾಯಿತು. ಜೋಯಿಸರು ಜನ್ಮಕುಂಡಲಿಯನ್ನು ಪರಿಶೀಲಿಸಿ ಈತನು ಧರ್ಮವೇತ್ತನೂ ಮಹಾನೀಯನೂ ಆಗಿ ಸದಾ ಪುಣ್ಯಕರ್ಮಾನುಷ್ಠಾನನಿಷ್ಠನಾಗಿ ಸರ್ವಜನಪೂಜಿತನಾಗುವನು ಎಂದು ಹೇಳಿದರು. ಖುದಿರಾಮ ದಂಪತಿಗಳು ಹರ್ಷಭರಿತರಾದರು. ಶ್ರೀರಾಮಕೃಷ್ಣನು ಐದು ವರ್ಷಪ್ರಾಯದಲ್ಲೇ ಪುರಾಣ ಕಥೆಗಳನ್ನೂ ಸ್ತೋತ್ರ ಪಾಠಗಳನ್ನೂ ಬಹು ಬೇಗ ಕಲಿತನು. ಆದರೆ ಎಲ್ಲರಂತೆ ಸಾಮಾನ್ಯ ಆಟಪಾಟಗಳಲ್ಲಿ ನಿರತನಾಗದೇ, ಸದಾ ಮಾವಿನತೋಪಿನಲ್ಲಿ ಪುರಾಣಕಥೆಗಳ ಬಯಲಾಟ ಮಾಡುವುದರಲ್ಲೂ ದೇವತೆಗಳ ಗೊಂಬೆಮಾಡುವುದರಲ್ಲೂ ಆಸಕ್ತನಾಗಿದ್ದನು. ಕ್ರಮಶಃ ನಿರ್ಜನಪ್ರಿಯತೆಯೂ, ಧ್ಯಾನಾಸಕ್ತಿಯೂ, ಜಗತ್ತಿನ ಸೃಷ್ಟಿ ಸೌಂದರ್ಯದಲ್ಲಿ ಪ್ರೇಮವೂ ಅತಿಶಯವಾಗಿ ಬೆಳೆದವು. ಇವರು ಹೆಣ್ಣು ಹೊನ್ನು ಮಣ್ಣುಗಳ ವ್ಯಾಮೋಹ ತೊರೆದವರು, ಸ್ವತಃ ತಾನು ಕಟ್ಟಿಕೊಂಡ ಹೆಂಡತಿಯನ್ನೇ ಸಾಕ್ಷಾತ್ ಜಗನ್ಮಾತೆಯಂತೆ ಕಂಡು, ಆಕೆಯನ್ನೇ ಒಂದುದಿನ ಪೀಠದಲ್ಲಿ ಕುಳ್ಳಿರಿಸಿ ಅರ್ಘ್ಯ ಪಾದ್ಯಾದಿಗಳಿಂದ ಪೂಜಿಸಿ ಹೂವಿನಿಂದಲಂಕರಿಸಿ ಸಾಷ್ಟಾಂಗ ನಮಸ್ಕಾರ ಮಾಡಿದವರು. ಗಂಗೆಯ ಕರೆಯಲ್ಲಿ ಚಿನ್ನವನ್ನೂ ಮಣ್ಣನ್ನೂ ಕೈಯಲ್ಲಿ ಹಿಡಿದು 'ಇದೂ ಅದೇ, ಅದೂ ಇದೆ, ಎಂದು ಗಂಗೆಗೆ ಬಿಸುಟವರು, ಇವರ ಭಕ್ತಿಯಲ್ಲಿ ಆಡಂಬರವಿರಲಿಲ್ಲ, ವಿವಶತೆ ಇತ್ತು. ತನ್ನನ್ನು ತಾವೇ ಭಕ್ತಿ ಪರವಶರಾಗಿ ಮರೆಯುತ್ತಿದ್ದರು. ಇವರಿಗೆ ಅನೇಕ ಶಿಷ್ಯರಿದ್ದರು. ಇವರ ಪ್ರವಚನವನ್ನು ಜನರು ಕಣ್ಣುಬಾಯಿಬಿಟ್ಟು ಕೇಳುತ್ತಿದ್ದರು. ಇವರ ದೃಷ್ಟಾಂತ ಕಥೆಗಳು ಅತಿಮನೋಹರವಾಗಿರುತ್ತಿದ್ದುವು. ಇವರು ಸರ್ವಧರ್ಮ ಸಮನ್ವಯಾಚಾರ್ಯರೆಂದೇ ಪ್ರಸಿದ್ಧರಾದರು. ಇವರು ಮುಂದೆ ಹಿಂದೂ ಮತವನ್ನು ಎತ್ತಿ ಹಿಡಿಯುವ ಶಿಷ್ಯನಿಗಾಗಿ ಕನಸು ಕಂಡು, ಅವನಿಗಾಗಿ ಕಾದರು. ಪ್ರಚಂಡ ಇಚ್ಛಾಶಕ್ತಿ, ಕ್ರಿಯಾಶಕ್ತಿ, ಜ್ಞಾನಶಕ್ತಿಗಳು ಅವನಲ್ಲಿರಬೇಕೆಂದೂ, ಅವನು ವಾಚಾಳಿಯಾಗಿರಬೇಕೆಂದೂ, ವಜ್ರಶರೀರಯುತನಾಗಿರಬೇಕೆಂದೂ, ಕುಸುಮದಂತೆ ಕೋಮಲನಾಗಿ ವಜ್ರದಂತೆ ಕಠೋರನಾಗಿರಬೇಕೆಂದೂ ಅವರು ಆಶಿಸಿದರು. ಅಂತಹ ಶಿಷ್ಯೋತ್ತಮನೇ ಕಲ್ಕತ್ತೆಯ ವಿಶ್ವನಾಥ ದತ್ತ ಮತ್ತು ಭುವನೇಶ್ವರೀ ದೇವಿಯವರ, ದೇವರ ಅನುಗ್ರಹದಿಂದ ಪಡೆದ ಶ್ರೀ ವಿವೇಕಾನಂದರು. ಇವರ ಮನೋಧೈರ್ಯ ಎಲ್ಲರನ್ನೂ ಬೆರಗುಗೊಳಿಸುತ್ತಿತ್ತು. ಇವರು ಹುಟ್ಟುಧ್ಯಾನಸಿದ್ಧರು. ಹುಡುಗರೊಡನೆ ಧ್ಯಾನಕ್ಕೆ ಕುಳಿತ ಇವರ ಮೇಲೆ ನಾಗರ ಹಾವೊಂದು ಹರಿದರೂ ಬಾಹ್ಯ ಪ್ರಪಂಚ ಮರೆತಿದ್ದ ಇವರು ಅದಾವುದೂ ತಿಳಿಯದಾದರು. ಇವರ ಜ್ಞಾನದಾಹಕ್ಕೆ ಅಂತ್ಯವಿರಲಿಲ್ಲ. ಸರಿಯಾದ ಗುರುವಿಗಾಗಿ ಅಲೆದಾಡಿದರು. ದೇವರನ್ನು ನೋಡಿರುವಿರಾ ಎಂದು ಅನೇಕ ಮಹಾತ್ಮರನ್ನು ಕೇಳಿದರು. ಯಾರಿಗೂ ಏನೂ ಹೇಳಲಾಗಲಿಲ್ಲ. ಕಡೆಗೆ ದಕ್ಷಿಣೇಶ್ವರದಲ್ಲಿದ್ದ ಶ್ರೀರಾಮಕೃಷ್ಣರನ್ನು ಕಂಡರು. ಅವರಿಗೂ ಆ ಪ್ರಶ್ನೆ ಹಾಕಿದರು. ಅವರು ತಕ್ಷಣವೇ, ಇವನೇ ತಾವು ಹುಡುಕುತ್ತಿದ್ದ ಮೇಧಾವಿ ಶಿಷ್ಯನೆಂದು ತಿಳಿದು 'ಹೌದು, ನಿನ್ನನ್ನು ನೋಡುತ್ತಿರುವಂತೆಯೇ ಅವನನ್ನು ನೋಡಿರುವೆ, ಆದರೆ ಹೆಂಡತಿ ಮಕ್ಕಳಿಗಾಗಿ ಕಣ್ಣೀರು ಕರೆಯುವರೇ ಎಲ್ಲರೂ. ದೇವರಿಗಾಗಿ ಅಳುವವರಾರು' ಎಂದರು. ವಿವೇಕಾನಂದರು ಬಡಪೆಟ್ಟಿಗೆ ಒಪ್ಪುವವರಲ್ಲ. ಅವರನ್ನು ಚೆನ್ನಾಗಿ ಪರೀಕ್ಷಿಸಿದರು. ಇವರ ಕಾಮಿನೀ ಕಾಂಚನ ತ್ಯಾಗವನ್ನು ಒರೆತಿಕ್ಕಿ ನೋಡಿದರು. ಹಿಂದಿನ ಕಾಲದಲ್ಲಿ ಗುರುವಾದವರು ಶಿಷ್ಯನನ್ನು ಪರೀಕ್ಷಿಸಿ ವಿದ್ಯೆ ಹೇಳಿ ಕೊಡುತ್ತಿದ್ದರು. ವಿವೇಕಾನಂದರಾದರೋ ಗುರುವನ್ನೇ ಪರೀಕ್ಷಿಸಿದರು ಅದನ್ನು ಶ್ರೀರಾಮಕೃಷ್ಣರೂ ಅನುಮೋದಿಸಿದರು, ಮೆಚ್ಚಿದರು. ವಿವೇಕಾನಂದರಿಗೆ ತಾವು ಕಂಡ ದೈವದ ಸಾಕ್ಷಾತ್ಕಾರ ಮಾಡಿಸಿದರು. ವಿವೇಕಾನಂದರೂ ಕಾಮಿನೀ ಕಾಂಚನ ವ್ಯಾಮೋಹ ತೊರೆದವರು. ಇವರು ಅಮೆರಿಕಾದಲ್ಲಿ ನಡೆಯುವ ವಿಶ್ವಧರ್ಮ ಸಮ್ಮೇಳನದಲ್ಲಿ ಭಾಗವಹಿಸಲು ಬಂದರು ಬೋಸ್ಟನ್ನಿನಲ್ಲಿ ಪ್ರೊಫೆಸರ್ ರೈಟ್ ಎಂಬುವರನ್ನು ಸಂಧಿಸಿ ಅವರು ಕೊಟ್ಟ ಪರಿಚಯ ಪತ್ರವನ್ನು ಸಮ್ಮೇಳನದ ಅಧಿಕಾರಿಗಳಿಗೆ ಕೊಟ್ಟು ವಿಶ್ವಧರ್ಮ ಸಮ್ಮೇಳನದಲ್ಲಿ ಮಾತನಾಡಲು ಅವಕಾಶ ಪಡೆದರು.

ಶ್ರೀ ವಿ. ಎಸ್. ರಾಮಾನುಜಾಚಾರ್ಯ

1893 ನೇ ಸೆಪ್ಟೆಂಬರ್ ತಿಂಗಳಲ್ಲಿ ವಿಶ್ವಧರ್ಮ ಸಮ್ಮೇಳನ ಚಿಕಾಗೋ ನಗರದಲ್ಲಿ ನಡೆಯಿತು. ವಿಶಾಲವಾದ ಪ್ರಾಂಗಣದಲ್ಲಿ ಪ್ರಪಂಚದ ಎಲ್ಲಾ ಪ್ರತಿನಿಧಿಗಳೂ ಬಂದು ನೆರೆದಿದ್ದರು. ಸ್ವಾಮಿ ವಿವೇಕಾನಂದರ ಭವ್ಯ ವ್ಯಕ್ತಿತ್ವ ಚಿತ್ತಾಕರ್ಷಕವಾಗಿತ್ತು. ಅವರ ಹೊಳೆಯುವ ಕಣ್ಣುಗಳು ತೇಜಸ್ವೀಮುಖ ಎಲ್ಲರ ಮನಸ್ಸನ್ನೂ ಸೆಳೆಯಿತು. ಅವರು ಗುರುಗಳನ್ನೂ, ಶಾರದೆಯನ್ನೂ ನಮಿಸಿ 'ಸಹೋದರ, ಸಹೋದರಿಯರೇ' ಎಂದು ಸಂಬೋಧಿಸಿ ಮಾತನಾಡಲುಪಕ್ರಮಿಸಿದರು. ಇದನ್ನು ಕೇಳಿದ್ದೇ ತಡ, ಜನರ ಪ್ರಚಂಡ ಕರತಾಡನ ಗಗನಕ್ಕೆ ಮುಟ್ಟಿತು. ಆ ಮೇಲೆ ಅವರು ಹಿಂದೂ ಧರ್ಮದ ವಿಶಾಲ ದೃಷ್ಟಿಯನ್ನು ಎಲ್ಲರ ಹೃದಯ ತೋರುವಂತೆ ಇಟ್ಟರು. ಯಾವ ಧರ್ಮವನ್ನೂ ಕಡೆಗಣಿಸಿ ಮಾತನಾಡಲಿಲ್ಲ. ಧರ್ಮಗಳೆಲ್ಲ ಬೇರೆ ಬೇರೆ ಕಡೆ ಹುಟ್ಟಿಬರುವ ನದಿಗಳಂತೆ, ಒಂದೊಂದು ಒಂದೊಂದು ಕಡೆ ಹುಟ್ಟಿ, ಒಂದೊಂದು ಹೆಸರು ಹೊಂದಿದ್ದರೂ,ಕೊನೆಗೆ ಎಲ್ಲಾ ಹೋಗಿ ಸಾಗರಕ್ಕೆ ಬಿದ್ದಾಗ ಅದರಲ್ಲಿ ಒಂದಾಗುತ್ತವೆ. ಅದರಂತೆಯೇ ಜೀವರು ಒಬ್ಬೊಬ್ಬರು ಒಂದೊಂದು ಧರ್ಮದಲ್ಲಿ ಹುಟ್ಟಿ, ಕೊನೆಗೆ ಗುರಿಮುಟ್ಟಿದಾಗ, ಎಲ್ಲರೂ ಒಂದೇ ಪರಮಾತ್ಮನಲ್ಲಿ ಐಕ್ಯರಾಗುವರು ಎಂದರು. 'ಯಾವ ದಾರಿಯಿಂದಲಾದರೂ ಬರಲಿ ಕೊನೆಗೆ ಲ್ಲರೂ ನನ್ನ ಕಡೆಗೆ ಬರುವರು' ಎಂಬ ಶ್ರೀಕೃಷ್ಣನ ಸಂದೇಶ ಸಾರಿದರು. ಸ್ವಾಮೀಜೀಯವರ ಉದಾರ ವಾಣಿಯನ್ನು ಕೇಳಿದಾಗ ಕತ್ತಲೆಯ ಕೋಣೆಗೆ ಸೂರ್ಯನ ಬೆಳಕು ಬಂದಂತೆ ಆಯಿತು. ಸ್ವಾಮಿ ವಿವೇಕಾನಂದರು ಕೇವಲ ಹದಿನೈದು ನಿಮಿಷ ಮಾತನಾಡಿ ಜಗದ್ವಿಖ್ಯಾತ ವ್ಯಕ್ತಿ ಆದರು. ಹಿಂದೂ ಧರ್ಮದ ತತ್ತ್ವವನ್ನು ಪ್ರಸಾರಮಾಡಿ ಭಾರತಕ್ಕೇ ಗೌರವತಂದುಕೊಟ್ಟು, ಅವರ ವ್ಯಕ್ತಿತ್ವ ರೂಪಿಸಿದ ಗುರು ಶ್ರೀ ರಾಮಕೃಷ್ಣರ ಆದರ್ಶ ಶಿಷ್ಯರಾಗಿ ಬೆಳಗಿದರು.

( 20ನೇ ಪುಟದಿಂದ )

ಶ್ರೀಹರಿಯಲ್ಲಿ ನೀಲಮೇಘಕಾಂತಿ, ಯೌವನ, ಆ ಯೌವನಕ್ಕೆ ತಕ್ಕಂತಹ ತಾರುಣ್ಯ ಭೂಷಣಗಳು. ಇವುಗಳನ್ನು ಕಂಡು ಲಕ್ಷ್ಮಿ ಆನಂದ ಪಡುವಳು. ಆ ಲಕ್ಷ್ಮೀಕಾಂತನಾದರೋ ರಮೆಯಲ್ಲಿ ಸ್ವರ್ಣ ಕಾಂತಿಯಂತೆ ಮಿನುಗುವ ಸೌಂದರ್ಯ ತಾರುಣ್ಯ, ತಾರುಣ್ಯಕ್ಕೆ ತಕ್ಕಂತಹ ಕುಚದ್ವಯ. ಅವುಗಳನ್ನು ಅಲಂಕರಿಸಿರುವ ಆಭರಣಗಳನ್ನು ನೋಡಿ ಆನಂದಪಡುತ್ತಾನೆ. ಇಷ್ಟು ಭೇದವಿಲ್ಲದಿದ್ದರೆ ಅವರಿಬ್ಬರನ್ನೂ ಬೇರೆ ಬೇರೆಯಾಗಿ ಗುರ್ತಿಸುವುದು ಅಸಾಧ್ಯವಾಗಿತ್ತು. ಇಲ್ಲಿ ಪ್ರಕೃತಿ ಪುರುಷ, ಶೇಷ ಶೇಷೀ ಭಾವದ ತತ್ತ್ವವನ್ನೂ ಕ್ಷರ ಅಕ್ಷರಗಳ ತಾರತಮ್ಯಭಾವದ ವೇದಾಂತ ಅರ್ಥವನ್ನು ನಾವು ಕಾಣಬಹುದು.

ಈ ಜಗದೊಡೆಯನು ಜಗನ್ನಾಥನು, ಲಕ್ಷ್ಮಿಯು ಆತನ ಪರಮ ಪ್ರೇಯಸಿ, ದಾಸಿ. ಆಕೆ ಅನನ್ಯ ಭಕ್ತಳು. ಭಕ್ತನು ಅವನಿಗೆ ಅಧೀನ. ಆದ್ದರಿಂದಲೇ ಅವನು ಭಕ್ತ ಪರಾಧೀನ. ಪರಮಾತ್ಮ ಲಕ್ಷ್ಮಿಗೆ ಮಾತ್ರ ವಲ್ಲಭನಲ್ಲ. ಎಲ್ಲಾ ಚೇತನರ ಆತ್ಮಗಳಿಗೂ ಒಡೆಯ. ಅಂದರೆ ಭಾಗವತ ಶೇಷತ್ವ. ಪರಮಪುರುಷನನ್ನು ಹೊರತು ಬೇರೆ ಜೀವಿಗಳೆಲ್ಲವೂ ಸ್ತ್ರೀ ಸ್ವಭಾವವೇ. ಎಲ್ಲಾ ಚೇತನರಿಗೂ ಅನನ್ಯಾರ್ಹ ಶೇಷತ್ವ, ತತ್ಪಾರತಂತ್ರ್ಯ, ತದೇಕಭೋಗತ್ವ ಹಾಗೂ ತದ್ವಿರಹಾ ಸಹತ್ವ ಸಹಜ ಗುಣಗಳು ಹಾಗೂ ತಪ್ಪದ ಗುಣಗಳು.

37ನೆಯ ಶ್ಲೋಕದಲ್ಲಿ ಮಹಾಲಕ್ಷ್ಮಿಯ ಮನೋಹರ ರೂಪದ ವರ್ಣನೆ ಇದೆ.

38ನೆಯ ಶ್ಲೋಕದಲ್ಲಿ ಆಶ್ರಿತ ರಕ್ಷಣೆಗಾಗಿ ದಕ್ಷಿಣ ಪಾದವನ್ನು ಕೆಳಗೆ ಚಾಚಿ ವಾಮಪಾದವನ್ನು ಮಡಚಿ ಕುಳಿತು (ಪದ್ಮದ ಮಧ್ಯೆ) ಅಭಯ ಪ್ರಧಾನವನ್ನು ಸೂಚಿಸುವ ಪದ್ಮಹಸ್ತವನ್ನುಳ್ಳ ಕರುಣಾಮೃತವನ್ನು ಬೀರುವ ಕಟಾಕ್ಷೆಯುಳ್ಳ ಲಕ್ಷ್ಮಿಯ ವರ್ಣನೆ ಇದೆ.

ಮುಂದೆ ಲಕ್ಷ್ಮೀಕಟಾಕ್ಷದ ವೈಭವ, ಆಕೆಯ ಸೌಂದರ್ಯದ ವರ್ಣನೆ, ಲಕ್ಷ್ಮಿ ತನ್ನ ಪತಿಯನ್ನು ಆನಂದಪಡಿಸುವ ವೈಖರಿ, ಆಕೆಯ ದಿವ್ಯಾಭರಣಗಳ ವರ್ಣನೆ. ಭಗವಂತನ ವಿವಿಧ ಅವತಾರಗಳಲ್ಲಿ ಲಕ್ಷ್ಮಿಯು ಸದೃಶವಾದ ಅವತಾರಗಳನ್ನೆತ್ತಿದ ಐತಿಹ್ಯಗಳ ವರ್ಣನೆಗಳು ಇವೆ.

50ನೆಯ ಶ್ಲೋಕದಲ್ಲಿ ಭಗವಂತನ ಆಶ್ರಿತ ರಕ್ಷಣೆಗಿಂತ ಲಕ್ಷ್ಮಿಯ ಆಶ್ರಿತರಕ್ಷಣತ್ವವು ಹೆಚ್ಚು ಸ್ವಾರಸ್ಯವಾದದು ಎಂಬುದಾಗಿ ವಿವರಿಸುವಾಗ ಹಾಡಿದ ಈ ಶ್ಲೋಕ ಬಹು ಪ್ರಸಿದ್ಧವಾಗಿದೆ. ಈ ತತ್ತ್ವ ಒಂದು ನೂತನ ಚೈತನ್ಯವನ್ನೇ ನಮಗೆ ನೀಡಿದೆ.

ಮಾತರ್ಮೈಥಿಲಿ ರಾಕ್ಷಸೀ ಸ್ತ್ವಯಿ
ತದೈ ವಾದ್ರಾಪರಾಧಾ ಸ್ತ್ವಯಾ ।
ರಕ್ಷನ್ತ್ಯಾ ಪವನಾತ್ಮಜಾತ್
ಲಘುತರಾ ರಾಮಸ್ಯ ಗೋಷ್ಠೀಕೃತಾ ।
ಕಾಕಂ ತಂ ಚ ವಿಭೀಷಣಂ
ಶರಣಂ ಇತ್ಯುಕ್ತಿಕ್ಷಮೌ ರಕ್ಷತಃ ।
ಸಾ ನಃ ಸಾಂದ್ರ ಮಹಾಗಸಃ
ಸುಖಯತು ಕ್ಷಾಂತಿ ಸ್ತವಾಕಸ್ಮಿಕೀ ॥"

(ಎಲೈ ಲೋಕಮಾತೆಯಾದ ಸೀತೆಯೆ,ತ್ರಿಜಟೆಯು ಸ್ವಪ್ನವೃತ್ತಾಂತದಿಂದ ಅನೇಕ ರಾಕ್ಷಸರು ಹತರಾಗುತ್ತಾರೆ, ರಾಮನು ವಿಜಯಿಯಾಗುತ್ತಾನೆ, ಎಂಬುದಾಗಿ ತಿಳಿಸಿದ್ದರೂ ಕೂಡ–ಪದೇ ಪದೇ ನಿನಗೆ ಹಿಂಸೆಯನ್ನು ಇತ್ತ ರಾಕ್ಷಸರನ್ನು ಕೊಲ್ಲಲು ಹನುಮಂತನು ರಾವಣ ವಧೆಯನ್ನು ನಿನಗೆ ತಿಳಿಸಲು ಬಂದಾಗ ಪ್ರಾರ್ಥಿಸಿಕೊಂಡರೂ-ನೀನು ರಾಕ್ಷಸರನ್ನು ಕೊಲ್ಲಲು ಸಮ್ಮತಿಸದೆ ಅವರನ್ನು ಕಾಪಾಡಿದ ದೃಷ್ಟಾಂತ (ನಿದರ್ಶನ)ವು ಮೂರು ಲೋಕಗಳನ್ನೂ ಸುತ್ತಿಬಂದು, ಶರಣಾದ ಕಾಕಾಸುರನನ್ನು ಕಾಪಾಡಿದ ರಾಮನ ಶರಣಾಗತ ರಕ್ಷಣ ವ್ರತಕ್ಕಿಂತಲೂ, ಎಲ್ಲರನ್ನೂ ತೊರೆದ ಬಂದ ವಿಭೀಷಣ ಶರಣಾಗತಿ ರಕ್ಷಣೆಗಿಂತಲೂ, ನೀನು ರಾಕ್ಷಸಿಯರನ್ನು ಕಾಪಾಡಿದ ಮಾರ್ಗ, ಅನಾಥರನ್ನು ಪಾಲಿಸುವ ಸಂಕಲ್ಪ ವಿಷ್ಣುವಿನ ಶರಣಾಗತ ರಕ್ಷಣೆಗಿಂತ ಮಿಗಿಲಾದುದು. ನೀನೇ ಆಶ್ರಿತ ವತ್ಸಲೆ.)

ಮುಂದಿನ 52ನೆಯ ಶ್ಲೋಕದಲ್ಲಿ ತಾಯಿಯೇ ಜಗದ ಪಿತನು ಕೋಪಿಸಿಕೊಂಡಾಗ ನೀನು ನಮ್ಮ ಪರವಾಗಿ ಅವನೊಡನೆ ವಾದಮಾಡಿ "ಪುತ್ರನು ಮಾಡಿದ ಅಪರಾಧವೇನಾದರೂ ಏನು? ಮಕ್ಕಳ ಮೇಲೆ ಇಷ್ಟು ಕೋಪವೆ? ಇದೇನು ಮಹಾ ಅಪರಾಧವೇ? ಕರ್ಮ ಬಂಧದಿಂದ ಜೀವಿಗಳು ಈ ಲೀಲಾ ವಿಭೂತಿಯಲ್ಲಿ ತಪ್ಪು ಮಾಡುವರು. ಅವರ ದೋಷವೇನಾದರೂ ಏನು" ಎಂಬುದಾಗಿ ಸರಸ ಸಲ್ಲಾಪಗಳಿಂದ, ತನ್ನ ಕಟಾಕ್ಷಗಳಿಂದ ಪತಿಯನ್ನು ಸಂತೈಸಿ ಚೇತನರ ಮಹಾಪರಾಧಗಳನ್ನು ಮರೆಯುವಂತೆ ಮಾಡುವ ನಿನ್ನ ತಾಯ್ತನ ಎಂತಹ ಅಸದೃಶವಾದದು ಎಂಬುದಾಗಿ ಹೊಗಳುತ್ತಾರೆ. ಮುಂದೆ ಐದಾರು ಶ್ಲೋಕಗಳಲ್ಲಿ ಲಕ್ಷ್ಮಿಯ ಔದಾರ್ಯ· ಆಶ್ರಿತ ರಕ್ಷಣತ್ವ ವಿವರಿಸಿ ಲಕ್ಷ್ಮಿಯು – ಕ್ಷೀರ ಸಮುದ್ರ, ಪರಮಪದ, ಶ್ರೀರಂಗ–ಇಲ್ಲಿ ಸದಾ ನೆಲೆಸಿರುತ್ತಾಳೆ ಎಂಬುದಾಗಿ ಸ್ತುತಿಸುತ್ತಾ ಕೊನೆಯ 61 ನೆಯ ಶ್ಲೋಕದಲ್ಲಿ ಇಹಪರಗಳಲ್ಲಿ ದಿವ್ಯ ದಂಪತಿಗಳಾದ ಶ್ರೀಲಕ್ಷ್ಮೀನಾರಾಯಣರ ಕೈಂಕರ್ಯವನ್ನು ಮಾಡಿ ಮೋಕ್ಷ ಸಾಮ್ರಾಜ್ಯವನ್ನು ಪಡೆದು ಧನ್ಯರಾಗೋಣ ಎನ್ನುವರು. ಇಲ್ಲಿ ಪ್ರತಿಯೊಂದು ಶ್ಲೋಕವು ಭಕ್ತಿಯಲ್ಲಿ ಮಿಂದು ಪುನೀತವಾಗಿವೆ. ಹಂತ ಹಂತದಲ್ಲಿ ಗಂಭೀರವಾಗಿ ಮುಂದೆ ಸಾಗಿ ಭಾವ ತುಂಬಿ ವೇದಾಂತ ರಸಮಯ ಭಾವನೆಯ ಲಹರಿಯೊಡನೆ ಲಕ್ಷ್ಮೀಕಟಾಕ್ಷದ ಕರುಣೆಯ ಕೀರ್ತನೆಗಳೊಡನೆ ರಾಗಮಯವಾಗಿದೆ. ಶ್ರೀ ಪರಾಶರ ಭಟ್ಟರ ವಾಕ್ಸಂಪತ್ತಿ ದೇದೀಪ್ಯಮಾನವಾಗಿ ಬೆಳಗುತ್ತಿದೆ. ಇದು ಮಧುರಕಾಂತಾ ಸಂಮಿತ ಕಾವ್ಯ.ಸಕಲ ವೇದಾಂತ ಸಾರದ ರತ್ನ ಭಂಡಾರ, ಭಕ್ತಿಕಾವ್ಯಂ ಇದನ್ನು ಪ್ರತಿದಿನ ಪಠಿಸಿ ಭಗವಂತನ ಪರತ್ವವನ್ನು ಕಾಣಬಹುದು. ತಾಯಿಯ ಕರುಣಾರಸವನ್ನು ಸವಿಯಬಹುದು. ಶ್ರೀಗುಣರತ್ನ ಕೋಶದ ವಿಷಯ "ಪವಿತ್ರಾಣಾಂ ಪವಿತ್ರಂ ಯೋ ಮಂಗಲಾನಾಂ ಚ ಮಂಗಲಮ್".

★

# ಕನಕದಾಸರ ಹರಿಭಕ್ತಿಸಾರ

ಭಕ್ತಿಯೇ ಸ್ಥಾಯಿಯಾಗಿರುವ ಕನಕದಾಸರ 'ಹರಿಭಕ್ತಿಸಾರ' ಭಾಮಿನೀಷಟ್ಪದಿಯಲ್ಲಿ ರಚಿತವಾಗಿರುವ ಒಂದು ಪುಟ್ಟ ಕೃತಿ. ಪದ್ಯಗಳ ಸಂಖ್ಯೆಯಲ್ಲಿ ಶತಕದಷ್ಟು ಇರುವ ಈ ಕೃತಿಯನ್ನು 'ಷಟ್ಪದೀ ರೂಪದ ಶತಕ'ವೆಂದು ಕರೆಯಬಹುದು. ಇದು ಕನಕದಾಸರ ವಿಶಿಷ್ಟಸಾಧನೆಯೂ ಹೌದು.

ಲೌಕಿಕ ಜೀವನದಿಂದ ಬೇಸತ್ತ ಜೀವವೊಂದು ಭಗವಂತನ ಸಾನ್ನಿಧ್ಯಕ್ಕಾಗಿ ಪರಿತಪಿಸುತ್ತ, ಭವ ಬಂಧನದಿಂದ ತನ್ನನ್ನು ಬಿಡುಗಡೆಗೊಳಿಸಬೇಕೆಂದು ಹರಿಯಲ್ಲಿ ಮೊರೆಯಿಡುವ ಸನ್ನಿವೇಶವೇ 'ಹರಿಭಕ್ತಿಸಾರ'ದ ವಸ್ತು. ಅತ್ಯಂತ ಸರಳವಾಗಿ ರಚಿತವಾಗಿದ್ದರೂ ಹೃದ್ಯವಾಗಿರುವ ಈ ಕೃತಿಯಲ್ಲಿ ಅಡೆತಡೆಯಿಲ್ಲದೆ ಸುಲಭವಾಗಿ ಹರಿವ ಕನಕದಾಸರ ಆಕ್ಷತಕವಾದ ಆರ್ದ್ರಭಕ್ತಿಯ ಚಿತ್ರಣ ಸೊಗಸಾಗಿ ನಿರೂಪಿತಗೊಂಡಿದೆ. ಅಲ್ಲದೆ ಮುಕ್ತಿಗಾಗಿ ಕನಕದಾಸರು ಆರಿಸಿಕೊಂಡಿರುವ ಶರಣಾಗತಿಯ ಮಾರ್ಗದ, ಹಾಗೂ ಸ್ವಂತ ಜೀವನಾನುಭವದಿಂದ ಅವರು ಕಂಡು ಕೊಂಡಿರುವ ಈ ಬದುಕಿನ ಬೆಲೆಯ ಚಿತ್ರಣಗಳು 'ಹರಿಭಕ್ತಿಸಾರ'ದ ಆಕರ್ಷಣೆಯಲ್ಲಿ ಪ್ರಮುಖ ಪಾತ್ರ ವಹಿಸಿವೆ. ಹರಿಗೆ ಅಂಕಿತವಾಗಿರುವ ಈ ಕೃತಿಯ ಪ್ರತಿಪದ್ಯದ ಅಂತ್ಯದಲ್ಲೂ "ರಕ್ಷಿಸು ನಮ್ಮನನವರತ" ಎಂಬ ಮಾತನ್ನು ಬಳಸಿರುವುದು ಗಮನಾರ್ಹ. ಇಲ್ಲಿ ಕನಕದಾಸರು 'ನನ್ನನ್ನು' ಎನ್ನದೆ 'ನಮ್ಮನ್ನು' ಎಂದಿದ್ದಾರೆ. ಇದು ಅವರ ವಿಶಾಲವಾದ ಮನೋಧರ್ಮವನ್ನೂ, ಭಕ್ತರೆಲ್ಲರ ಪರವಾದ ಕನಕದಾಸರ ಮೊರೆಯನ್ನೂ, ಶರಣಾಗತಿಯ ನಿಲುವನ್ನೂ ಸೂಚಿಸುತ್ತದೆ.

'ಹರಿಭಕ್ತಿಸಾರ'ವನ್ನು ಅಧ್ಯಯನಿಸುವಾಗ ದ್ವೈತ ಪಂಥದ ಕೆಲವು ಪ್ರಮುಖ ತತ್ತ್ವಗಳ ಹಿನ್ನೆಲೆ ಈ ಕೃತಿಗಿರುವುದು ಎದ್ದು ಕಾಣುತ್ತದೆ. ಅಂದರೆ ಕನಕದಾಸರು ಈ ಕೃತಿಯಲ್ಲಿ ಹರಿಯ ಮೇಲೆ ತಳೆದಿರುವ ಧೋರಣೆ ಅಭಿಪ್ರಾಯಗಳು ದ್ವೈತ ಪಂಥದ ಕೆಲವು ತತ್ತ್ವಗಳ ಹಿನ್ನೆಲೆಯಿಂದಲೇ ಬಂದವುಗಳಾಗಿವೆ. ಅವುಗಳೆಂದರೆ; ಹರಿ ಸಕಲಚರಾಚರಗಳಿಗೆ ಮಾತ್ರವಲ್ಲ, ಎಲ್ಲ ದೇವತೆಗಳಿಗೂ ಒಡೆಯ, ಸಕಲ ದೈವಗಳಲ್ಲೂ ಹರಿಯೇ ಉತ್ತಮ, ಎಲ್ಲ ಜೀವಿಗಳೂ ಅವನಿಗೆ ಅಧೀನರು, ಸಕಲರನ್ನೂ ರಕ್ಷಿಸುವವನು ಅವನೆ. ಹರಿ ಸಮಸ್ತ ವೇದಶಾಸ್ತ್ರಗಳಲ್ಲಿ ಪ್ರತಿಪಾದಿತನಾಗಿದ್ದಾನೆ: ಮುಕ್ತಿಯನ್ನು ಸಾಧಿಸಬೇಕಾದರೆ ಅದಕ್ಕೆ ಶುದ್ಧ ಭಕ್ತಿಯೇ ಮೆಟ್ಟಿಲು—ಇತ್ಯಾದಿ, ತಮ್ಮ ಜೀವನದ ಮುಖ್ಯಗುರಿಯಾದ ಮುಕ್ತಿ ಸಾಧನೆಗಾಗಿ ಹರಿಯನ್ನು ಮೊರೆಯಿಡುವ ಸಂದರ್ಭದಲ್ಲಿ ಕನಕದಾಸರು ತಮಗೆ ಸೂಕ್ತವೆನಿಸಿದ ಕಡೆಗಳಲ್ಲೆಲ್ಲ ರಾಮಾಯಣ, ಮಹಾಭಾರತ, ಪುರಾಣಗಳ ಕಥಾಸಂದರ್ಭಗಳನ್ನು ಧಾರಾಳವಾಗಿ ಉಪಯೋಗಿಸಿ ಕೊಂಡಿದ್ದಾರೆ. ಇದು ಅವರಿಗೆ ಪೌರಾಣಿಕ ವಿಷಯಗಳ ಮೇಲೆ ಎಷ್ಟು ಹಿಡಿತವಿತ್ತೆಂಬುದನ್ನೂ ಸೂಚಿಸುತ್ತದೆ.

ಕೃತಿಯ ಪ್ರಾರಂಭದ ಹದಿನೇಳು ಪದ್ಯಗಳಲ್ಲಿ ಕನಕದಾಸರು ಹರಿಯ ವಿವಿಧನಾಮಾವಳಿಗಳನ್ನು ಏಕಾಗ್ರಚಿತ್ತದಿಂದ ಸ್ತುತಿಸಿದ್ದಾರೆ. ಇಲ್ಲಿಂದ ಮುಂದೆ ವಿವರವಾಗಿ ಹರಿಯ ಗುಣಾತಿಶಯ, ಮಹಿಮಾತಿಶಯಗಳನ್ನು ಭಕ್ತಿಯಿಂದ ವರ್ಣಿಸುತ್ತಾ ಅಂತಹ ಹರಿ ನಮ್ಮನ್ನು ಅನವರತವೂ ಕಾಪಾಡಲಿ ಎಂದು ಪ್ರಾರ್ಥಿಸುತ್ತಾ ಸಾಗಿದ್ದಾರೆ.

ಹರಿಯ ಮಹಿಮೆ ಎಂತಹುದೆಂಬುದು ವರ್ಣಿಸಲಸದಳವಾದ ವಿಷಯ. ಭಗವಂತನ ಒಲವು ಒಂದಿದ್ದರೆ ಮಾತ್ರ ಸದ್ಗತಿಯುಂಟು. ಇನ್ಯಾವ ಕರ್ಮ ಮಾಡಿಯೂ ಫಲವಿಲ್ಲ. ಪರಮಾತ್ಮನೊಲಿದರೆ "ಭ್ರಮರಕೀಟ ನ್ಯಾಯದಂದದಲಿ" ತೃಣವೇ ಪರ್ವತವಾಗಬಲ್ಲದು. ಅವನ ಅನುಗ್ರಹ ಒಂದಿದ್ದರೆ ಪಾಪಕೃತ್ಯಮಾಡಿದ ಭಕ್ತರೂ ಕ್ಷಮಿಸಲ್ಪಡುತ್ತಾರೆ. ಉದಾಹರಣೆಗೆ, ಬ್ರಹ್ಮನಾದರೊ ಮಗಳನ್ನೆ ವಿವಾಹವಾದ, ಗೌತಮನಂತಹ ಮುನಿಯ ಪತ್ನಿಯಾದ ಅಹಲ್ಯೆಯನ್ನು ಇಂದ್ರ ಕಾಮಿಸಿದ, ಆದರೆ ಹರಿ ಇಂತಹವರ ತಪ್ಪನ್ನೂ



ಮನ್ನಿಸಿ ಶ್ರೇಷ್ಠ ಪದವಿಯನ್ನೆ ನೀಡಿದ. ಹೀಗೆ ತಪ್ಪಿತಸ್ಥ ಭಕ್ತರನ್ನೇ ಕ್ಷಮಿಸಿದ ಹರಿ ಸದ್ಭಕ್ತರನ್ನು ಬಿಡುವನೆ? ರಾಜಸಭೆಯಲ್ಲಿ, ಮಾನ ಹೋಗುವ ಸಂದರ್ಭಕ್ಕೆ ಪಕ್ಕಾದ ದ್ರೌಪದಿ ಹರಿಗಾಗಿ ಮೊರೆಯಿಟ್ಟಾಗ ಕರುಣೆಯಿಂದ "ಅಕ್ಷಯ ವಿತ್ತು" ಕಾಪಾಡಿದವರು ಯಾರು? ಶಿಲೆಯಾದ ಅಹಲ್ಯೆಯನ್ನು ಶಾಪದಿಂದ ವಿಮುಕ್ತಿಗೊಳಿಸಿ ಪವಿತ್ರಳನ್ನಾಗಿ ಮಾಡಿದವನು ಹರಿಯೇ ತಾನೇ! ಗಜೇಂದ್ರನನ್ನು ರಕ್ಷಿಸಿದವನು, ಪ್ರಹ್ಲಾದನನ್ನು ಅವನ ತಂದೆಯ ಚಿತ್ರಹಿಂಸೆಯಿಂದ ಬಿಡಿಸಿದವನು, ಧ್ರುವನಿಗೆ ರಾಜಪದವಿಯನ್ನು ಕೊಡಿಸಿದವನು, ಪಾಂಡವರನ್ನು ರಕ್ಷಿಸಿದವನು ಹರಿಯಲ್ಲದೆ ಇನ್ನಾರು? ಇನ್ನು ಅಗಣಿತೋಪಮನೂ, ಅಮಿತ ವಿಕ್ರಮನೂ, ಅಗಮ್ಯನೂ, ಸಚ್ಚಾರಿತ್ರ್ಯ ಉಳ್ಳವನೂ ಆದ ಹರಿಯ ನಾಮಮಹಿಮೆಯನ್ನು ಕೇಳಬೇಕೆ? ಅದರ ಬಲವೇ ಬಲ, ಒಮ್ಮೆ ಅವನ ಹೆಸರನ್ನು ಉಚ್ಚರಿಸಿದರೂ ಸಾಕು. ಎಂತಹ ದುರ್ಗತಿಯಲ್ಲಿರುವವರೂ ಸದ್ಗತಿಯನ್ನು ಹೊಂದುತ್ತಾರೆ. ದೇಹಪೋಷಣೆಗಾಗಿ ಅಡವಿಯಲ್ಲಿ ಜನರನ್ನು ಅಡ್ಡಗಟ್ಟಿ ಕೊಲ್ಲುತ್ತಿದ್ದ ಕ್ರೂರಿಯಾದ ಬೇಡ ವಾಲ್ಮೀಕಿ ಹರಿಯ "ನಾಮದೊಳಧಿಕವೆರಡಕ್ಷರವ ಬಣ್ಣಿಸುತ" ಧನ್ಯನಾಗಿ ಮುನಿಕುಲ ಸಂಪನ್ನನಾದ. ಪಾಪಿಯಾದ ಅಜಾಮಿಳ ಪ್ರಾಣವಿಯೋಗ ಕಾಲದಲ್ಲಿ ತನ್ನ ಮಗನ ನಾರಾಯಣ ಎಂಬ ಹೆಸರನ್ನು ಕರೆದನೆಂದು ಭಾವಿಸಿ ಜವನಿಂದ ಕಾಯ್ದ ಹರಿಯ ಔದಾರ್ಯ, ಮಹಿಮೆಗಳೇ ಅವನ ನಾಮಬಲಕ್ಕೆ ಸಾಕ್ಷಿ. ಇಂತಹ ಹರಿಯ ಹೆಸರು "ಎನ್ನ ಜಿಹ್ವೆಯಲ್ಲೂ ಸದಾ ಮೊಳಗುವಂದಿ" ಹರಿಕರುಣಿಸಲಿ ಎಂದು ಕನಕದಾಸರು ಭಕ್ತಿಯಿಂದ ಕೇಳಿಕೊಂಡಿದ್ದಾರೆ.

'ಅನಾಥರನು ಪಾಲಿಸಿ ವರಕೊಡುವ ಉದಾರಿ' ಎಂಬ ಬಿರುದುಳ್ಳ ಹರಿಯ ಔದಾರ್ಯದ ಬಗ್ಗೆ ಕನಕದಾಸರಿಗೆ ವಿಸ್ಮಯವಿದೆ. ವೀರರಾವಣನೊಂದಿಗೆ ಹೋರಾಡಿದ ಪರಾಕ್ರಮಿ ಹನುಮಂತನನ್ನು "ಬ್ರಹ್ಮ ಪಟ್ಟ" ದಲಿ ಸೇರಿಸಿದ ಹರಿಯ ಔದಾರ್ಯ, ತ್ರಿಜಗದೊಳಗೆ ಯಾರಲ್ಲೂ ಕಾಣಲಾರದಂತಹುದು. ಹರಿಯಷ್ಟು ಕರುಣೆ ಇತರ ಯಾವ ದೈವಗಳಿಗಿದೆ? ದುರಾತ್ಮನಾದ ರಾವಣನ ತಮ್ಮ ವಿಭೀಷಣನನ್ನು ಕರುಣೆಯಿಂದ ಮನ್ನಿಸಿ ಪಟ್ಟ ಕಟ್ಟಿದ. ಇಡೀ ಜಗತ್ತನ್ನೆ ತನ್ನ ಕರುಣೆಯ ವರ್ಷಸುರಿಸಿ ಪಾವನವನ್ನಾಗಿ ಮಾಡಿರುವವನು ಹರಿ. ಲೋಕಕಂಟಕರಾದ ಶಕಟಾಸುರ, ಕಂಸ, ಖರ, ಜರಾಸಂಧ ಮೊದಲಾದ ದುಷ್ಟ ಶಕ್ತಿಗಳನ್ನು ನಾಶಪಡಿಸಿ ಲೋಕರಕ್ಷಣೆ ಮಾಡಿರುವವನು ಅವನೆ. ಒಂದರ್ಥದಲ್ಲಿ ದುಷ್ಟರನ್ನು ನಿಗ್ರಹಿಸಿಯೂ ಅವರಿಗೆ ಸದ್ಗತಿಯನ್ನೆ ಕೊಟ್ಟಿದ್ದಾನೆಂದು ಹೇಳಬಹುದು. ಒಟ್ಟಿನಲ್ಲಿ ಮನುಷ್ಯ, ರಾಕ್ಷಸ, ದೇವತೆ ಎಂಬ ಭೇದಗಳಿಲ್ಲದೆ ಎಲ್ಲರ ಮೇಲೂ ಸಮಾನವಾದ ದಯೆತೋರುವವನು ಹರಿ ಮಾತ್ರ.

ಹರಿ ಸರ್ವವ್ಯಾಪಿ "ಇಲ್ಲಿಹನು ಅಲ್ಲಿಲ್ಲವೆಂಬೀ ನೊಲ್ಲು ಸಲದು, ಹೊರಗೊಳಗೆ ನೀನಲ್ಲದನ್ಯತ್ರವಿಲ್ಲವೆಂಬುದನೆಲ್ಲ ಕೆಲಕೆಲರು ಬಲ್ಲರಿಳೆಯೊಳು ಭಾಗವತರು........." ಎಂಬ ಕನಕದಾಸರ ಮಾತು ಇದನ್ನೇ ಹೇಳುತ್ತದೆ. "ಬಸುರೊಳಗೆ ಬ್ರಹ್ಮಾಂಡಕೋಟಿಯ ಪಸರಿಸಿದ ಪರಮಾತ್ಮ" ನಾದ ಹರಿಗೆ ಕನಕದಾಸರು ಸಂಪೂರ್ಣ ದಾಸರಾಗಿದ್ದಾರೆ. ಸಕಲಚರಾಚರಗಳ ಬದುಕಿಗೆ ಸೂತ್ರಧಾರ ಹರಿಯೆ; ಏನಿದ್ದರೂ ಎಲ್ಲರೂ ಅವನು ಕುಣಿಸಿದಂತೆ ಕುಣಿಯುವ ಬೊಂಬೆಗಳಷ್ಟೆ. ಒಡೆಯನಾದ ಪರಮಾತ್ಮನ ಮುಂದೆ ತನ್ನ ಅಲ್ಪತ್ವವನ್ನೂ, ದೀನತ್ವವನ್ನು ಪ್ರಕಟಪಡಿಸುವ ಒಂದು ಪದ್ಯ ಯಾವ ಚಮತ್ಕಾರವೂ ಇಲ್ಲದೆ ತನ್ನ ಸರಳತೆಯಲ್ಲಿ ಭಾವಪೂರ್ಣತೆಯನ್ನು, ಸಹಜತೆಯನ್ನು ಕಾಯ್ದಿರುವ ಬಗೆ ಸುಂದರವಾಗಿದೆ.

ನಿನ್ನ ಸೂತ್ರದೊಳಾಡುವುವು ಜೈ
ತನ್ಯ ಸಚರಾಚರಗಳೆಲ್ಲವು
ನಿನ್ನ ಸೂತ್ರವು ತಪ್ಪಿದರೆ ಮುಗ್ಗುವುವು
ಹಾಹೆಗಳು
ಇನ್ನು ನಮಗೆ ಸ್ವತಂತ್ರವೆಲ್ಲಿಯ
ದನ್ಯ ಕರ್ಮ ಸುಕರ್ಮವೆಲ್ಲವ
ನಿನ್ನದೆಂದೊಪ್ಪಿಸಿದೆ ರಕ್ಷಿಸು ನಮ್ಮನನವರತ

ಹರಿ ಸಕಲ ಚರಾಚರಗಳಿಗೆ ಮಾತ್ರವಲ್ಲದೆ ಎಲ್ಲ ದೈವಗಳಿಗೂ ಒಡೆಯ. ದೇವರ ದೇವನಾದ ಅವನ ಸಾರ್ವಭೌಮತ್ವವನ್ನು ಕುರಿತ ಈ ಪದ್ಯವನ್ನು ನೋಡಿ.

ಸಿರಿಯು ಕುಲಸತಿ ಸುತನು ಕಮಲಜ
ಹರಿಯ ಸೊಸೆ ಶಾರದೆ ಸಹೋದರಿ
ಗಿರಿಜೆ ಮೈದುನ ಶಂಕರನು ಸುರರೆಲ್ಲ ಕಿಂಕರರು
ನಿರುತ ಮಾಯೆಯು ದಾಸಿ ನಿಜಮಂ
ದಿರವಜಾಂಡವು ಜಂಗಮಸ್ಥಾ
ವರಕುಟುಂಬಿಗ ನೀನು ರಕ್ಷಿಸು ನಮ್ಮನನವರತ

ಸಮಸ್ತಲೋಕರಕ್ಷಕ ಹರಿಯೆ. "ಹಸ್ತಿವಾಹನ ನಾದಿಯಾದ ಸಮಸ್ತದೇವ ನಿಕಾಯದೊಳಗೆ ಪ್ರಶಸ್ತನಾದನು ನಿನ್ನ ಪೋತ, ಶರಣಾಗತರ ಪೊರೆವ ಹಸ್ತಕಲಿತ ಸುದರ್ಶನದೊಳರಿ ಮಸ್ತಕವನಿಳುಹುವ ಪರಾತ್ಪರ ವಸ್ತುವಲ್ಲವೆ ನೀನು" ಎಂಬ ಕನಕರ ಕೇಳುವಿಕೆಯೂ ಅವರ ಮೇಲಿನ ಮಾತನ್ನೆ ಪೋಷಿಸುತ್ತವೆ. ಬ್ರಹ್ಮ, ಈಶ್ವರರ ಕೆಲಸವೇನಿದ್ದರೂ ಹಗೆರಾಕ್ಷಸರಿಗೆ ಕೇಳಿದ ವರಗಳನ್ನಿತ್ತು ತಲೆಯಮೇಲೆ ಕೈಹೊತ್ತು ಕುಳಿತುಕೊಳ್ಳುವುದಷ್ಟೆ. ಆಗ ಅವರಿಬ್ಬರ ಸಮಸ್ಯೆಯನ್ನು ಬಗೆಹರಿಸಲು, ಲೋಕವನ್ನು ಕಾಯಲು ಬೇಕಾದವನು ಹರಿಯೆ. ಆದ್ದರಿಂದ ಈ ಜಗತ್ತಿನಲ್ಲಿ ಅವನನ್ನು ಜಯಿಸಬಲ್ಲವರು ಯಾರೂ ಇಲ್ಲ.

ಹೀಗೆ ಭಗವಂತನ ಅನನ್ಯತೆಯನ್ನು ಮನನ ಮಾಡುತ್ತ, ಇಂತಹ ಪರಮಾತ್ಮನ ಆಧಿಕ್ಯವನ್ನು ತಾವು ಚಿಕ್ಕಂದಿನಲ್ಲಿಯೇ ತಿಳಿಯದೆ, ಆರಾಧಿಸದೆ ಲೌಕಿಕ ಜೀವನದಲ್ಲಿ ಮುಳುಗಿ ಹೋದುದುಕ್ಕಾಗಿ ಕನಕದಾಸರು ಮರುಗುತ್ತಾ, ಪಶ್ಚಾತ್ತಾಪ ಪಡುತ್ತಾರೆ. ಅದಕ್ಕಾಗಿ ಭಗವಂತನಲ್ಲಿ ಕ್ಷಮೆ ಕೇಳುತ್ತ ದುಃಖ ತೋಡಿಕೊಳ್ಳುವ ಅವರ ಪ್ರಾಮಾಣಿಕ ರೀತಿ ನಮ್ಮನ್ನು ಸೆಳೆಯುವಂತಹುದು.

ತರಳತನದಲಿ ಕೆಲವು ದಿನದುರು
ಭರದ ಗರ್ವದಿ ಕೆಲವು ದಿನ ಮೈ
ಮರೆದು ನಿಮ್ಮಡಿ ಗೆರಗದಾದೆನು
ವಿಷಯ ಕೇಳಿಯು

ನರಕ ಭಾಜನನಾಗಿ ಕಾಮಾ
ತುರದಿ ಪರಧನ ಪರಸತಿಗೆ ಮನ
ಹರಿದ ಪಾಪವ ಕಳೆದು ರಕ್ಷಿಸು ನಮ್ಮನನವರತ

ಕಾಮ, ಕ್ರೋಧ, ಲೋಭ ಮೋಹಗಳಾದಿಯಾದ ಅರಿಷಡ್ವರ್ಗಗಳ ಬಲೆಗೆ ಸಿಕ್ಕಾಗಿ ಆದರಿಂದ ಸಂಸಾರದ ವ್ಯಾಮೋಹಕ್ಕೆ ಬಲಿಯಾಗಿ, ಜಂಜಾಟದಲ್ಲಿ ಸಿಲುಕಿ, ನಾನಾ ಜನ್ಮಾಂತರಗಳಲ್ಲಿ ಅಲೆದಾಡುತ್ತ, ಇನ್ನೂ ಹರಿಯ ಪಾದದರ್ಶನ ವಾಗದುದಕ್ಕಾಗಿ ಕನಕದಾಸರು ಕಳವಳಿಸುತ್ತ, ಹುಟ್ಟು-ಸಾವುಗಳ ಚಕ್ರಕ್ಕೆ ತನ್ನನ್ನು ಸಿಲುಕಿಸುತ್ತಿರುವ ಬ್ರಹ್ಮನ ಮೇಲೇ ಸಿಟ್ಟು ಗೊಂಡು,

ಗಣನೆಯಿಲ್ಲದ ಜನನಿಯರು ಮೊಲೆ
ಯುಣಿಸಲಾಪಯಬಿಂದುಗಳನದ
ನೆಣಿಸಲಳವೇ ಸಪ್ತಸಾಗರಕಧಿಕವೆನಿಸಿಹುದು
ಬಣಗು ಕಮಲಜನದಕೆ ತಾನೇ
ಮಣೆಯಗಾರನು ಈತ ಮಾಡಿದ
ಕುಣಿಕೆಗಳ ನೀ ಬಿಡಿಸಿ ರಕ್ಷಿಸು ನಮ್ಮನನವರತ

ಎಂದು ಹರಿಯನ್ನು ಕೇಳಿಕೊಂಡಿದ್ದಾರೆ. ಈ ಭವ ಬಂಧನದ ಬಿಡುಗಡೆಗೆ ಭಕ್ತಿಯೇ ಕಾರಣ. ಯಾವ ಕಾರ್ಯವನ್ನೆ ಮಾಡಲಿ ಜ್ಞಾನವಿಲ್ಲದೆ ಮೋಕ್ಷವಿಲ್ಲ. ಜ್ಞಾನಕ್ಕೆ ಭಕ್ತಿಯೇ ಕಾರಣ ("ಏನು ಮಾಡಿದಡೇನು ಮುಕ್ತಿ ಜ್ಞಾನ ವಿಲ್ಲದಡಿಲ್ಲ ಭಕ್ತಿ") ಆ ಭಕ್ತಿಯಸ್ವಾದರೂ ಕರುಣಿಸು ಎಂದು ಕೇಳಿಕೊಳ್ಳುತ್ತಾರೆ. ನಿರಾಡಂಬರವಾದ ಶುದ್ಧ ಪ್ರೇಮವನ್ನು ಹರಿಸಿಯೂ, ಕನಕದಾಸರು ಹೀಗೆ ಕೋರುತ್ತಿರುವುದು ಅವರ ಹಿರಿಮೆ.

ಹೀಗೆ ಜನ್ಮಾಂತರಗಳ ಸುಳಿಯಲ್ಲಿ ಸಿಲುಕಿ, ಲೌಕಿಕದ ಅನಿತ್ಯತೆಯನ್ನು ಉಂಡ ಕನಕದಾಸರಿಗೆ ಈ ಬದುಕಿನ ಮೇಲೆ ಜುಗುಪ್ಸೆ ಮೂಡಿ, ವೈರಾಗ್ಯ ಬಂದು ಈ ದೇಹ "ನೀರ ಮೇಲಿನ ಗುಳ್ಳೆಯಂತೆ", ಈ ಜೀವನ 'ನುಣುಪಾದ ಕನ್ನಡಿಯ ಮೇಲಿಟ್ಟು ಉದ್ದಿನಂತೆ', 'ಗಾಳಿಗೊಡ್ಡಿದ ದೀಪ' ದಂತೆ ಎನಿಸಿದ್ದು ಸಹಜವೇ. ಹೀಗೆ ಬುದ್ಧಿ ಬಂದು ವೈರಾಗ್ಯ ಮೂಡಿದ ಮೇಲಾದರೂ ಹರಿಸ್ಮರಣೆ ಮಾಡಿ ಹೊರಟರೆ, ಒಂದೆಡೆ ಯಮನ ಭೀತಿ ಕಾಡುತ್ತದೆ. ಆ ಯಮಭೀತಿಯಿಂದ ತನ್ನನ್ನು ಪಾರುಮಾಡಿ, ಹರಿಸ್ಮರಣೆ ಮಾಡಲು ಅವಕಾಶಮಾಡಿ ಕೊಡುವಂತೆ ಕನಕರು ಭಗವಂತನಲ್ಲಿ ಪ್ರಾರ್ಥಿಸುತ್ತಾರೆ. ವಿಷಯ ಸುಖಗಳಿಗೆ ಮರುಳಾಗಿ, ಕಡೆಯಲ್ಲಿ ಯಮನ ದಾಡೆಗೆ ಸಿಲುಕಿಕೊಳ್ಳುವ ಬದಲು, ಹರಿನಾಮಸ್ಮರಣೆ ಮಾಡುತ್ತ ಪಾಪವನ್ನು ಕಳೆದು ಬದುಕುವುದೇ ಜೀವನದ ಅತ್ಯುತ್ತಮ ಧ್ಯೇಯ ಎಂಬ ನಿಲುವು ಕನಕದಾಸರದು.

ನಿಜವಾಗಿ, ಬದುಕಿನ ಅನಿತ್ಯತೆಯನ್ನು ಕಂಡುಕೊಂಡಾಗ, ಕನಕದಾಸರು ಅದರ ಬಗ್ಗೆ ತಾತ್ತ್ವಿಕ ಚಿಂತನೆಗೆ ತೊಡಗಿರುವುದು ಸಹಜವಾಗಿಯೇ ಇದೆ. ಅವರು ಈ ದೇಹಕ್ಕೆ ಕಟ್ಟಿರುವ ಬೆಲೆ ಇಷ್ಟೇ;

ಎಂಟುಗೇಣಿನ ದೇಹ ರೋಮಗ
ಳೆಂಟು ಕೋಟಿಯು ಕೀಲ್ಗಳಿರುವ
ತ್ತೆಂಟು ಮಾಂಸಗಳಿಂದ ಮಾಡಿದ ಮನೆಯ
ಮನವೊಲಿದು
ನೆಂಟ ನೀನಿರ್ದಗಲಿದಡೆ ಒಣ
ಹೆಂಟೆಯಲಿ ಮುಚ್ಚುವರು ದೇಹವ
ಉಂಟೆ ಫಲ ಪುರುಷಾರ್ಥ ರಕ್ಷಿಸು
ನಮ್ಮನನವರತ

ಒಂದು ದಿನ ಬಿದ್ದು ಹೋಗುವ ಈ ದೇಹಕ್ಕೆ ಬೆಲೆಯಿರುವುದು ಅದರೊಳಗೆ ಹರಿ ವಾಸಿಸುತ್ತಿರುವ ತನಕ ಮಾತ್ರ. ಆತ್ಮರೂಪದ ಪರಮಾತ್ಮ ಈ ದೇಹವನ್ನು ತ್ಯಜಿಸಿ ದೊಡನೆ, ಅದು ಸುಡುಗಾಡಿನಲ್ಲಿ ಬೆಂದು ಉರಿದು ಹೋಗುವ ಕೊಂಪೆಯಾಗುತ್ತದಷ್ಟೆ. ಬೇರಾವ ನೆಂಟನೂ ಈ ದೇಹಕ್ಕೆ ಆಗ ರಕ್ಷಣೆ ಕೊಡಲಾರ, ಈ ದೇಹವನ್ನು ನಂಬಿ ಸಂಸಾರ ಬಂಧನಕ್ಕೆ ಬೀಳುವವ ನಿಜವಾಗಿಯೂ ಮತಿಗೇಡಿ. ಹೀಗೆಯೇ ಜೀವನವನ್ನು ಕುರಿತು ದೀರ್ಘವಾಗಿ ಚಿಂತಿಸುತ್ತ ಕನಕದಾಸರು ಹೇಳುತ್ತಾರೆ. ಮೊದಲೇ ಕ್ಷಣಿಕವಾಗಿರುವ ಈ ಜೀವಕ್ಕೆ ಜಾತಿ ಭೇದ ಬೇರೆ ಯಾಕೆ? ಹೇಗಿದ್ದರೂ ಎಲ್ಲರೂ ಹರಿಯ ಮಕ್ಕಳು. ಎಲ್ಲರ ದೇಹದಲ್ಲಿರುವುದೂ ಅವನ ಅಂಶವೇ. ಹರಿಯಲ್ಲಿ ಭಕ್ತಿಯಿಡುವುದಕ್ಕೂ ಜಾತಿಗೂ ಯಾವ ಸಂಬಂಧವೂ ಇಲ್ಲ. ಸರಿಯಾದ ಭಕ್ತನಾಗಲು ಅರ್ಹರಾಗಿದ್ದ ಕನಕರಿಗೆ ಅವರ ಕಾಲದ ಒಂದು ವರ್ಗದ ಜನ ಅವರನ್ನು, ಅವರ ಕುಲವನ್ನೂ ಹೀನಾಯವಾಗಿ ಕಂಡುದು ಬೇಸರ ತರಿಸಿರಬೇಕು; ಆದ್ದರಿಂದಲೇ ಅಂತಹವರನ್ನು ಹೇಳುತ್ತಾರೆ.

ತೊಲಗುವರು ಕಡೆ ಕಡೆಗೆ ತಾ ಹೊಲೆ
ಹೊಲೆಯೆನುತ ಕಳವಳಿಸಿ ಮೂತ್ರದ
ಬಿಲದೊಳಗೆ ಬಂದಿಹುದು ಕಾಣದೇ
ಬರಿದೆ ಮನನೊಂದು
ಗಲದೊಳಗೆ ಮುಳಿಗಿದರೆ ತೊಲಗದು
ಹೊಲೆಗೆಲಸ ವೀ ದೇಹದೊಳು ನೀ
ನೆಲೆಸಿರಲು ಹೊಲೆಯುಂಟೆ
ರಕ್ಷಿಸು ನಮ್ಮ ನನವರತ

'ಎಂಜಲಿ'ನ ನೆಪದಲ್ಲಿ ಮನುಷ್ಯತ್ವವನ್ನೆ ಕಳೆದುಕೊಂಡಿರುವ ಜನರನ್ನು ಕುರಿತು ಮೃದುವಾಗಿ ಲೇವಡಿ ಮಾಡಿರುವ ಈ ಪದ್ಯ ಮನೋಜ್ಞವಾಗಿದೆ.

ಎಂಜಲೆಂಜಲು ಎಂಬುರಾ ನುಡಿ
ಎಂಜಲಲ್ಲವೆ ವಾರಿ ಜಲಚರ
ದೆಂಜಲಲ್ಲವೆ ಹಾಲು ಕರುವಿನ ಎಂಜಲೆನಿಸಿರದೆ
ಎಂಜಲೆಲ್ಲಿಯದೆಲ್ಲಿಯುಂ ಪರ
ರೆಂಜಲಲ್ಲದೆ ಬೇರೆ ಭಾವಿಸ
ಲೆಂಜಲುಂಟೇ ದೇವ ರಕ್ಷಿಸು ನಮ್ಮನನವರತ

ನಮ್ಮ ಕೆಲವು ಕವಿಗಳ ಸಂಪ್ರದಾಯದಂತೆಯೇ ಹರಿಭಕ್ತಸಾರದಲ್ಲಿಯೂ ಕನಕದಾಸರು ಫಲಶ್ರುತಿಯನ್ನು ಹಾಡಿದ್ದಾರೆ. ಅವರ ಈ ಫಲಶ್ರುತಿಯಲ್ಲಿ ಕುಮಾರವ್ಯಾಸನ ಪ್ರಭಾವದ ಛಾಯೆಯಿರುವುದು ಸ್ಪಷ್ಟವಾಗಿ ಗೋಚರವಾಗುತ್ತದೆ. ಅಂತಹ ಒಂದು ಪದ್ಯವನ್ನು ನೋಡಿ :—

ನೂರು ಕನ್ಯಾದಾನವನು
ಭಾಗೀರಥಿ ಸ್ನಾನವನು ಮಿಗೆ ಕೈ
ಯಾರೆ ಗೋವ್ಗಳ ಪ್ರೇಮದಿಂದಲಿ
ಭೂಸುರರಿಗೊಲಿದು
ಊರುಗಳ ನೂರಗ್ರಹಾರವ
ಧಾರೆಯೆರೆದಿತ್ತಂತೆ ಫಲ ಕೈ
ಸೇರುವುದು ಹರಿಭಕ್ತಿಸಾರ ಕಥೆಯ ಕೇಳ್ದವಗೆ

(ಈ ಪದ್ಯವನ್ನು ಕುಮಾರವ್ಯಾಸ ಭಾರತದ ಆದಿ ಪರ್ವದ ಪೀಠಿಕಾ ಸಂಧಿಯ ೩೦ ನೆಯ ಪದ್ಯದೊಂದಿಗೆ ಹೋಲಿಸಿ)

'ಪ್ರಸನ್ನ ಸುಂದರವಾದ ಭಕ್ತಿನಿರ್ಭರ ಭಾವಗೀತೆ' ಯಂತಿರುವ 'ಹರಿಭಕ್ತಿಸಾರ'ವನ್ನು ರಚಿಸಿಯೂ "ಲೋಕದೊಳಗತ್ಯಧಿಕ ನೆನಿಸುವ ಕಾಗಿನೆಲೆ ಸಿರಿಯಾದಿ ಕೇಶವ ತಾ ಕೃಪೆಯೊಳಗೆ ನುಡಿಸಿದನು ಈ ಭಕ್ತಿ ಸಾರವನು" ಎಂದು ಹೇಳಿರುವ ಕನಕರ ವಿನಯ ಮೆಚ್ಚುವಂತಹುದು. ಏನೇ ಆಗಲಿ ಅವರೇ ಹೇಳುವಂತೆ ಹರಿಭಕ್ತಿ ಸಾರದ ಉದ್ದೇಶ ಇಷ್ಟೇ—"ಭಕ್ತಿ ಸಾರದ ಚರಿತೆಯನು ಹರಿಭಕ್ತರಾಲಿಸುವಂತೆ ರಚಿಸುವೆ..........ಮುಕ್ತಿಗಿದು ನೆಲೆದೋರುವುದು".

ಒಟ್ಟಿನಲ್ಲಿ ಐಹಿಕ ಜೀವನದ ಮೌಲ್ಯವನ್ನು ತಿಳಿಯ ಪಡಿಸುವಲ್ಲಿ, ಅದರಿಂದ ಬಿಡುಗಡೆ ಪಡೆಯಬೇಕಾದರೆ ಎಂತಹ ಮಾರ್ಗವನ್ನವಲಂಬಿಸಬೇಕೆಂದು ಪರಿಹಾರ ಕೋರುವಲ್ಲಿ 'ಹರಿಭಕ್ತಿಸಾರದ' ಪಾತ್ರ ಪ್ರಧಾನವಾಗಿದೆ. ಮುಕ್ತಿಗೆ ದಾರಿದೀಪದಂತಿರುವ ಈ ಕೃತಿಯಲ್ಲಿ ಭಕ್ತನೊಬ್ಬನ ಶುದ್ಧ ದೈವಪ್ರೇಮಕ್ಕೆ ಕನಕದಾಸರು ಮಾದರಿಯಾಗಿದ್ದಾರೆ. ಪ್ರಾಮಾಣಿಕವಾದ ಭಕ್ತಿಭಾವನೆಗೆ ಭಾಷೆಯಲ್ಲಿ ತಕ್ಕ ಅಭಿವ್ಯಕ್ತಿ ಕೊಟ್ಟಿರುವುದು ಕನಕದಾಸರ ಕಲೆಗಾರಿಕೆಗೆ ಸಾಕ್ಷಿಯಾಗಿದೆ. ಅಂತೂ ನಮ್ಮ 'ಸಂಸ್ಕೃತಿಯ ಜೀವನ ಮೌಲ್ಯಗಳ ಸಾರಾಂಶ'ದ ಪ್ರತೀಕವಾದ 'ಹರಿಭಕ್ತಿಸಾರ' ಹರಿದಾಸ ಪರಂಪರೆಯಲ್ಲಿ ಕನಕದಾಸರಿಗೆ ಒಂದು ವಿಶಿಷ್ಟ ಸ್ಥಾನಗಳಿಸಿ ಕೊಟ್ಟಿದೆ. ಭಕ್ತಿಸಾಹಿತ್ಯದ ಅಮೂಲ್ಯವಾದ ಕೃತಿಯಾಗಿದೆ.

—

ಎನ್. ಪುಷ್ಪ

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ-ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | ಶುಕ್ರವಾರಗಳಲ್ಲಿ |
|---|---|---|---|
| ಸುಪ್ರಭಾತ | ಪ್ರಾ 5–00 ಪ್ರಾ 5–30 | | ಪ್ರಾ 5–00 ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 ಪ್ರಾ 6–00 | | ಪ್ರಾ 5–30 ಪ್ರಾ 6–00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6–00 ಪ್ರಾ 6–30 | | ಪ್ರಾ 6–00 ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 ಪ್ರಾ 7–00 | | ಪ್ರಾ 6–30 ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 ಪ್ರಾ 7–30 | | ಪ್ರಾ 7–00 ಪ್ರಾ 7–30 |
| ಸರ್ವದರ್ಶನ | ಪ್ರಾ 7–30 ಪ್ರಾ 10–00 | *ಅಭಿಷೇಕ | ಪ್ರಾ 7–30 ಪ್ರಾ 8–30 |
| | | ಸಮರ್ಪಣ | ಪ್ರಾ 8–30 ಪ್ರಾ 9–30 |
| 2ನೇ ಅರ್ಚನೆ | | | |
| 2ನೇ ಗಂಟೆ | ಪ್ರಾ 10–00 ಪ್ರಾ 10–30 | | ಪ್ರಾ 9–30 ಪ್ರಾ 10–30 |
| *ಆರ್ಜಿತ ಕಲ್ಯಾಣೋತ್ಸವ | | | ಪ್ರಾ 10–30 ಮ 12–00 |
| ಸರ್ವದರ್ಶನ | ಪ್ರಾ 10–30 ಸಂ 6–30 | | ಪ್ರಾ 10–30 ಸಂ 6–30 |
| ರಾತ್ರಿ ಕೈಂಕರ್ಯ | | | |
| ರಾತ್ರಿ ಗಂಟೆ | ಸಂ 6–30 ರಾ 7–00 | | ಸಂ 6–30 ರಾ 7–00 |
| ಸರ್ವದರ್ಶನ | ರಾ 7–00 ರಾ 8–45 | | ರಾ 7–00 ರಾ 8–45 |
| ಏಕಾಂತ ಸೇವೆ | ರಾ 8–45 ರಾ 9–00 | | ರಾ 8–45 ರಾ 9–00 |

| | |
|---|---|
| *ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ – 150=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ | ರೂ – 3=00 |
| ಆರತಿ | ರೂ – 1=00 |
| ತೆಂಗಿನಕಾಯಿ ವರ್ತನೆ | ರೂ – 0=50 |
| ಅಭಿಷೇಕಾನಂತರ ದರ್ಶನ | ರೂ – 3=00 |

(14ನೇ ಪುಟದಿಂದ)

ಕ್ರಿ. ಶ. 8ನೆ ಶತಮಾನದಲ್ಲಿ ಜೋಧ್‌ಪುರದ ಪಾಟಿಯಾಲಾದಲ್ಲಿ ಚತುರ್ಮುಖ ಗಣಪತಿಯ ದೇವಾಲಯ ಸ್ಥಾಪಿಸಲ್ಪಟ್ಟಿದೆ.

ಚಾಲುಕ್ಯರು, ಹೊಯ್ಸಳರ ಕಾಲದಲ್ಲಿ ಅನೇಕ ಗಣಪತಿಯ ಗುಡಿಗಳು ಸ್ಥಾಪಿತವಾದವು.

ಒಟ್ಟಿನಲ್ಲಿ ಭರತಖಂಡದ ಬದರಿಕಾಶ್ರಮದಿಂದ ಕನ್ಯಾಕುಮಾರಿ, ರಾಮೇಶ್ವರದವರೆಗೂ ಗಣಪತಿಯ ದಿವ್ಯಮೂರ್ತಿಗಳು ವಿರಾಜಿಸುತ್ತಲಿರುವುದರಿಂದ ಆ ಮಹಾನುಭಾವನ ಮಹಿಮೆ ಎಂತಹುದೋ ಹೇಳಲಾಗದು.

ಗಣಪತಿಯ ಆರಾಧನೆಯು ಭರತಖಂಡ ಒಂದೇ ಅಲ್ಲ; ಇಡೀ ಜಗತ್ತಿನಲ್ಲಿ ಎಲ್ಲೆಡೆ ನಡೆಯುತ್ತಲಿವೆ. ದಕ್ಷಿಣ ಸಯಾಂನ "ಮಾನ್"ನಲ್ಲಿ ಗಣಪತಿಯ ದೇವಾಲಯವಿದೆ.

'ಕನ್ ಹಾಂ' ಎಂಬಲ್ಲಿಯೂ, ಚೀನಾದ 'ಕುರೋಟ' ಎಂಬಲ್ಲಿಯೂ ಗಣಪತಿ ದೇವಾಲಯಗಳಿವೆ.

ತುರ್ಕಿಸ್ಥಾನದಲ್ಲಿ ವರರಾಹಮುಖದ ಗಣಪತಿ ದೇವಾಲಯವಿದೆ.

'ಸಯಾಂ' ನಲ್ಲಿ ಗಣಪತಿ ದೇವಾಲಯವಿದೆ.

ಕಾಂಬೋಡಿಯಾದಲ್ಲಿ ಗಣಪತಿ ದೇವಾಲಯವಿದೆ.

ಜಾವಾದಲ್ಲಿ ಗಣಪತಿ ದೇವಾಲಯವಿದೆ.

ಜಪಾನನಲ್ಲಿ ಗಣಪತಿ ದೇವಾಲಯವಿದೆ. ಈ ರೀತಿಯಲ್ಲಿ ನಮ್ಮ ಗಣಪತಿ ಜಗದ್ವಂದ್ಯನಾಗಿರುತ್ತಾನೆ.

ಹೀಗೆ ಸರ್ವತೋಮುಖ ವ್ಯಾಪ್ತಿಯಿಂದ ಸಕಲ ಸಜ್ಜನರನ್ನೂ ಸರ್ವಕಾಲದಲ್ಲೂ ರಕ್ಷಿಸುತ್ತಲಿರುವ, ಸಕಲಸಜ್ಜನಪ್ರಿಯನಾದ, ವಿಚಿತ್ರಾಕೃತಿಯ, ಮಂಗಳ ವಿಗ್ರಹನಾದ, ಸಕಲಶಾಸ್ತ್ರಜ್ಞನಾದ, ಆಕಾಶತತ್ತ್ವಕ್ಕೆ ಅಭಿಮಾನಿಯಾದ, ನೈಷ್ಠಿಕ ಬ್ರಹ್ಮಚಾರಿಯಾದ, ಮಹಾವಿವೇಕಿಯಾದ, ಸ್ಥೂಲಕಾಯನಾದರೂ ಸೂಕ್ಷ್ಮಕಾರ್ಯವೆಸಗುವ, ಬೃಹದ್‌ಶರೀರಿಯಾದರೂ ಅಣುವಾಹನಾರೂಢನಾದ, ವಿಚಿತ್ರ ಮಹಿಮನಾದ ಪ್ರತಿವರ್ಷವೂ ಭಾದ್ರಪದ ಶುಕ್ಲಪಕ್ಷದ ಚತುರ್ಥೀ ದಿನ ವಿಶೇಷವಾಗಿ ಆರಾಧಿತನಾದ ನಮ್ಮ ಗಣಪತಿಯು ನಮ್ಮೆಲ್ಲರ ವಿಘ್ನಗಳನ್ನು ಪರಿಹರಿಸಿ ಅನವರತ ಸಂರಕ್ಷಿಸಲಿ; ಸಕಲ ಹರಿದಾಸರುಗಳೂ ವಿಚಿತ್ರರೀತ್ಯ ಈ ಗಣಪತಿಯನ್ನು ತಮ್ಮ ಪ್ರಾಸಾಧಿಕವಾಣಿಯಲ್ಲಿ ಚಿತ್ರ ವಿಚಿತ್ರವಾಗಿ ಕೊಂಡಾಡಿರುವರು. ಜಗನ್ನಾಥದಾಸರ 'ಹರಿಕಥಾಮೃತಸಾರ'ದಲ್ಲಿ ಗಣಪತಿಗಾಗಿ ಪ್ರತ್ಯೇಕ ಸಂಧಿಯೇ ಹೊರಟಿರುವುದು ಈ ಮಹಾತ್ಮನ ವೈಭವದ್ಯೋತಕ.

★

# ಮಧ್ಯಕಾಲೀನ ಕರ್ನಾಟಕದಲ್ಲಿ ಸಾಮಾಜಿಕ ಧಾರ್ಮಿಕ ಸಂಘಟನೆ

ಡಾ॥ ಕೆ.ಜಿ. ವಸಂತಮಾಧವ

ಕನ್ನಡಿಗರ ಸಾಮಾಜಿಕ ಸಂಘಟನೆ ಕನ್ನಡ ಸಂಸ್ಕೃತಿಯ ತಿರುಳು. ಈ ನಾಡಿನಲ್ಲಿ ಹಲವಾರು ಜಾತೀಯ ಸಂಘ ಮತ್ತು ಸಂಸ್ಥೆಗಳು ಉದಯಿಸಿದವು. ಈ ಸಂಘ ಮತ್ತು ಸಂಸ್ಥೆಗಳೊಳಗೆ ಸಹಕಾರ ಮತ್ತು ಸೌಹಾರ್ದ ಬೆಳೆಯುವಂತೆ ಕನ್ನಡಿಗರು ಪ್ರಯತ್ನಿಸಿದರು. ಈ ರೀತಿ ಸೌಹಾರ್ದ ಸಹಕಾರ ಮತ್ತು ಪರಸ್ಪರ ತಿಳುವಳಿಕೆಗೆ, ಇಲ್ಲಿನ ಧಾರ್ಮಿಕ ಶಕ್ತಿ ಪ್ರೇರಕವಾಯಿತೆಂದೂ, ಕನ್ನಡ ನಾಡಿನ ಹಲವಾರು ಶಾಸನಗಳು ತಿಳಿಸುತ್ತವೆ. ಇಷ್ಟಲ್ಲದೇ ಈ ಶಾಸನಗಳು ಕನ್ನಡನಾಡಿನವರ ಭಾವನಾತ್ಮಕ ಭಾರತದ ಐಕ್ಯತೆಯನ್ನು ಪ್ರತಿಬಿಂಬಿಸುತ್ತವೆ. ಇದು ಮರೆಯಲಾರದ ಕನ್ನಡನಾಡಿನ ಇತಿಹಾಸದ ಮುಖ್ಯ ವೈಶಿಷ್ಟ್ಯ. ಭಾರತೀಯ ಭಾವನಾತ್ಮಕ ಸಂಘಟನೆ ಮತ್ತು ಸಾಮಾಜಿಕ ಐಕ್ಯತೆಯನ್ನು ಕನ್ನಡಿಗರು ತಿಳಿದು ಆಚರಿಸಿದ್ದರು. ಇದು ಸದಾ ನೆನಪಿನಲ್ಲಿಡಬೇಕಾದ ಇತಿಹಾಸ ಪಾಠ.

ಹಲವಾರು ಪಂಗಡದೊಂದಿಗೆ ವಿಭಿನ್ನ ಜಾತಿಗಳ ಸಮುದಾಯವನ್ನು ಕನ್ನಡನಾಡಿನಲ್ಲಿ ನೋಡಬಹುದು. ಇವುಗಳೊಳಗೆ ಅನ್ಯೋನ್ಯತೆ ಇತ್ತೆಂದು ಹಲವಾರು ಶಾಸನಗಳು ತಿಳಿಸಿವೆ. ಕನ್ನಡನಾಡಿನ ದಾನಶಾಸನಗಳು ಶಿವ, ವಿಷ್ಣು, ಜಿನ, ಗಣಪತಿ ಮೊದಲಾದ ದೇವತೆಗಳನ್ನು ಏಕಕಾಲದಲ್ಲಿ ಸಮನಾಗಿ ವಂದಿಸಿ, ಧಾರ್ಮಿಕ ಅನ್ಯೋನ್ಯತೆಯನ್ನು ವ್ಯಕ್ತಪಡಿಸಿವೆ. ಉದಾ:– ಇಡುಗಾಣೆ ಜೈನ ಬಸದಿಯ ತೇದಿ 1472ರ ಶಾಸನವು ಪಾರ್ಶ್ವನಾಥ, ಪಂಚ ಪರಮೇಷ್ಠಿ ಮತ್ತು ಶಿವರ ಬಗ್ಗೆ ಏಕರೀತಿಯಲ್ಲಿ ಭಕ್ತಿ ವ್ಯಕ್ತಪಡಿಸಿದ್ದು, ಧಾರ್ಮಿಕ ಅನ್ಯೋನ್ಯತೆಯ ಪ್ರತೀಕವೆನ್ನಬಹುದು. ಇದೇ ರೀತಿ, ಗೋವರ್ಧನಗಿರಿ, ಪಾಡುವಳ್ಳಿ, ಮತ್ತು ಗೇರುಸೊಪ್ಪೆಯ ಶಾಸನಗಳು ತಿಳಿಸುತ್ತವೆ. ಗಣಪತಿ, ಶಿವ, ವಿಷ್ಣು, ಜಿನರನ್ನು ಏಕರೀತಿಯಲ್ಲಿ ವಂದಿಸಿ, ಸಕಲ ಮಾನವರಿಗೆ ದೇವರು ಒಬ್ಬನೆ; ಅವನನ್ನು ಯಾವ ರೀತಿಯಲ್ಲಿ ಕರೆದರೂ ಅವನಿಗೆ ತೃಪ್ತಿ ಎಂಬ ಅಮೂಲ್ಯಪಾಠವನ್ನು ನೀಡಿದ್ದನ್ನು ನಾವು ನೆನೆಯಬೇಕಾದ್ದೇ. ತಮ್ಮ ಮತ–ಪಂಥಗಳು ಯಾವುವೇ ಇರಲಿ, ತಾವು ಪೂಜಿಸಿ ಪ್ರಾರ್ಥಿಸುವ ದೈವವು ಎಲ್ಲಾ ಮಾನವರ ದೈವವೇ ಎಂಬ ಪ್ರಜ್ಞೆ ಬೆಳೆದು, ಇದು ಕನ್ನಡ ನಾಡಿನ ಧಾರ್ಮಿಕ ಅನ್ಯೋನ್ಯತೆಗೆ ಪ್ರೇರಕಶಕ್ತಿಯಾಯಿತು.

ಕನ್ನಡನಾಡಿನ ಸಮಾಜದಲ್ಲಿ ಹಲವಾರು ಜಾತಿ, ಪಂಗಡ, ಕುಲ, ಕುಟುಂಬಗಳಿದ್ದು, ಇವುಗಳು, ಇವುಗಳದೇ ಆದ ರೂಢಿ ನಿಯಮಗಳನ್ನು ಪಾಲಿಸಿಕೊಂಡು ಬರುತ್ತಿದ್ದವು. ಈ ವಿಭಿನ್ನ ರೀತಿಯ ಸಮಾಜಗಳಲ್ಲಿ ಪರಸ್ಪರ ಸಹಕಾರ ಮತ್ತು ತಿಳುವಳಿಕೆಗಳು ಇದ್ದು, ಗ್ರಾಮಜೀವನದ ಪ್ರಗತಿಗೆ ಕಾರಣವಾಗಿದೆಯೆಂದು ಕನ್ನಡನಾಡಿನ ಹಲವಾರು ಶಾಸನಗಳು ತಿಳಿಸುತ್ತವೆ. ಉದಾ:– ಹದಿನಾಲ್ಕನೇ ಶತಮಾನದ ಅಂತ್ಯದ ಗೇರುಸೊಪ್ಪೆಯ ಶಾಸನ, "ಗೇರಸೊಪ್ಪೆಯ ಮಹಾಜನಗಳ ಗುಣಾಗಳೆಂದರೆ ಅವರೊಳ್ ನಾನಾಜಾತಿ ಪರದರ್ ಅಗ್ರಾಣಿ ಸಂಯುಕ್ತರಾದ ಈ ಜೈನರ ಪಡೆವರ್ ಜೈನಮಾರ್ಗ ಜಲನಿಧಿ ಸಂವರ್ಧಿತ ಪುರಾಣ ಚಂದಮರ" ಎಂದು ತಿಳಿಸಿದ್ದು ಹಲವಾರು ಜಾತಿಗಳ ಪರಸ್ಪರ ಸಹಕಾರದ ದ್ಯೋತಕವಾಗಿದೆಯೆನ್ನಬಹುದು. ತುಳುನಾಡಿನ ಸಂಗೀತಪುರದಲ್ಲಿ ಅಳಿಯ ಸಂತಾನಕಟ್ಟನ್ನು ಹೊಂದಿದ ಹಲವಾರು ಜಾತಿಗಳಿದ್ದು, ಆ ಜಾತಿಯ ಜನರು ಆ ಪ್ರದೇಶದ ಶ್ರೇಷ್ಠತೆಗೆ ಕಾರಣರಾಗಿದ್ದರೆಂದು ಕ್ರಿ.ಶ. 1488ರ ನಗರ ಪಾರ್ಶ್ವನಾಥ ಬಸದಿಯ ಶಾಸನ ತಿಳಿಸುತ್ತದೆ.

ಕನ್ನಡನಾಡಿನ ಜನರಲ್ಲಿ ಹಲವಾರು ಪರಸ್ಪರ ವಿರೋಧವಿರುವ ಜಾತಿ ನಿಯಮಗಳಿದ್ದರೂ, ಧಾರ್ಮಿಕ ಕಾರ್ಯ ನಡೆಸುವಲ್ಲಿ ಇಲ್ಲಿನ ಜಾತಿ ಪಂಗಡಗಳೊಳಗೆ ಪರಸ್ಪರ ಸಹಕಾರವಿದ್ದಿದೆ ಎಂದು ಈ ನಾಡಿನ ಇತಿಹಾಸ ತಿಳಿಸುತ್ತದೆ. ಉದಾಹರಣೆಯಾಗಿ, ಬಸ್ರೂರಿನ ಮಹಾಲಿಂಗೇಶ್ವರ ದೇವಾಲಯದ ಶಾಸನವು (ಕ್ರಿ.ಶ. 1444ರ ತೇದಿ) ಧರ್ಮಪಟ್ಟಣದ ನಖರ ಮತ್ತು ಬಸ್ರೂರಿನ ಸೆಟ್ಟಿಕಾರರು ತಮ್ಮ ವ್ಯಾಪಾರದ ಸುಂಕ ಕಾಟಿಗದ್ಯಾಣ ಒಂದನ್ನು ಮಹಾಲಿಂಗೇಶ್ವರ ದೇವಸ್ಥಾನದ ಹೊನ್ನ ಕಳಸ ಪುನರ್ ರಚಿಸಲು ಕೊಟ್ಟಿದ್ದಲ್ಲದೇ ಉಳಿದ ಸುಂಕದ ಉತ್ಪತ್ತಿ ಇಲ್ಲಿನ ದೇವರ ವಿನಿ–ಯೋಗಕ್ಕೆ ಉಪಯೋಗಿಸಬೇಕೆಂದು ನಖರ ಮತ್ತು ಸೆಟ್ಟಿಕಾರರು ನಿರ್ಧರಿಸಿದರೆಂದು ತಿಳಿಸುತ್ತದೆ.

ಜಾತಿ ಪಂಗಡಗಳ ಪ್ರತಿನಿಧಿಗಳು ಒಂದೆಡೆ ಸಭೆ ಸೇರಿ ತಂತಮ್ಮ ಸಾಮಾಜಿಕ ಸಮಸ್ಯೆಗಳನ್ನಾಗಲಿ, ಅನ್ಯ ಜಾತಿ ಪಂಗಡಗಳಿಗೆ ಸಂಬಂಧಿಸಿದ ಪರಸ್ಪರ ವ್ಯಾಜ್ಯಗಳನ್ನಾಗಲಿ ತಮಗೆ ತೋರಿದ ರೀತಿಯಲ್ಲಿ ತೀರ್ಮಾನಿಸುತ್ತಿದ್ದರು. ಇದರಿಂದಾಗಿ ಸಾಮಾಜಿಕ ಶಾಂತಿ ಸ್ಥಾಪಿತವಾಗಿ ಗ್ರಾಮ ಜೀವನದ ಮುನ್ನಡೆಗೆ ಬಹಳ ಪ್ರಯೋಜನ ಆಯಿತು. ಈ ರೀತಿ ತಮ್ಮ ತಮ್ಮೊಳಗಿರುವ ಭಿನ್ನಾಭಿಪ್ರಾಯ ತೀರ್ಮಾನಿಸಿಕೊಂಡದ್ದನ್ನು ಬಸ್ರೂರಿನ ಕ್ರಿ. ಶ. 1455ರ ಒಂದು ಶಾಸನ ತಿಳಿಸುತ್ತದೆ. ಈ ನಗರದ ದೇವಿಕಬ್ಬದ ಆದಿ ಆಯನಕ್ಕೆ ಕುರಿಯನ್ನು ಮತ್ತು ಅಡಿಕೆಮರವನ್ನೂ ಕಾಣಿಕೆಯಾಗಿ ಕೊಡಲೋಸುಗ ಮೆರವಣಿಗೆ ಒಯ್ಯುವ ವಿಚಾರ ಮೂಡಗೇರಿಯ ಹಲರು ಮತ್ತು ಪಡುವಕೇರಿಯ ಹಲರೊಳಗೆ ವಾದ–ವಿವಾದ ನಡೆಯಿತು. ಕೊನೆಗೆ ಈ ವಿಷಯದಲ್ಲಿ ಎರಡು ಕೇರಿ ಹಲರು ಒಂದು ನಿರ್ಣಯಕ್ಕೆ ಬಂದು ವ್ಯಾಜ್ಯವನ್ನು ಬಗೆಹರಿಸಿಕೊಂಡರು. ಈ ನಿರ್ಣಯಕ್ಕೆ ಬರಲು, ನಾಲ್ವರು ನಾಡಾಡಿಗಳು, ಮೇಘೆಯರ ಬೀರನಾಯಕ, ನಗರಾಚಾರಿ ಈಸರ ಮತ್ತು ಅಣ್ಣಪ್ಪ ಸೇನಬೋವ ಸಹಕರಿಸಿದ್ದರು.

ಸಮಾಜದಲ್ಲಿ ಬೇರೂರಿದ್ದ ಹಾನಿಕರವಾದ ಒಂದು ರೂಢಿಯನ್ನು ಕುರಿತು ಸಮಾಜದ ಪ್ರಮುಖರು ಆಲೋಚನೆಗೈದು ಕಟ್ಟಳೆಯನ್ನು ಮಾಡಿ ಶಾಸನಾಧಿಕಾರವನ್ನು ಪಡೆದ ಒಂದು ಮಹತ್ತರವಾದ ಸಂದರ್ಭ ಕನ್ನಡನಾಡಿನ ಚರಿತ್ರೆಯಲ್ಲಿ ನೋಡಬಹುದು. ವಿಜಯನಗರ ಕಾಲದಲ್ಲಿ ಕನ್ಯಾಶುಲ್ಕ ಪದ್ಧತಿ ಪ್ರಬಲಿಸಿ ಸಮಾಜದಲ್ಲಿ ಹಾಹಾಕಾರವುಂಟಾಯಿತು. ಆಗ ಈ ಸನ್ನಿವೇಶವನ್ನು ವಿಮರ್ಶಿಸಲು ಪಡವೀಡುನಾಡಿನ ಕನ್ನಡ, ತಮಿಳು, ತೆಲುಗು, ಈ ಪಂಗಡಗಳ ಎಲ್ಲಾ ಗೋತ್ರ ಸೂತ್ರದ ಬ್ರಾಹ್ಮಣರು ಸಮ್ಮಿಲಿತರಾದರು. ಇನ್ನು ಮುಂದೆ ಬ್ರಾಹ್ಮಣ ಸಮಾಜದಲ್ಲಿ ಎಲ್ಲಾ ವಿವಾಹಗಳು ಸಂಪೂರ್ಣವಾಗಿ 'ಕನ್ಯಾದಾನ' ಪದ್ಧತಿಯಿಂದಲೇ ನಡೆಯಬೇಕು ಎಂದು ನಿರ್ಧರಿಸಿದರು. ಈ ನಿಯಮವನ್ನು ಉಲ್ಲಂಘಿಸಿ, 'ಕನ್ಯಾಶುಲ್ಕ'ಕ್ಕೆ ಎಡೆಗೊಡುವವರು ರಾಜಶಾಸನಕ್ಕೆ ಗುರಿಯಾಗಿ ಜಾತಿಬಾಹಿರರಾಗಬೇಕು ಎಂದು ಈ ಪರಿಷತ್ತಿನಲ್ಲಿ ತೀರ್ಮಾನವಾಯಿತು. ಇದು ಕನ್ನಡನಾಡಿನ ಚರಿತ್ರೆಯಲ್ಲಿ ಸಂಸ್ಮರಣೀಯವಾಗಿದೆ.

ಸಮಾಜದಲ್ಲಿ ಭಿನ್ನಶಕ್ತಿಗಳು ತಲೆಯೆತ್ತಿ ಸಾಮಾಜಿಕ ಶಾಂತಿಯನ್ನು ಕದಡಿಸಿದ ಘಟನೆಗಳು ಕನ್ನಡನಾಡಿನ ಇತಿಹಾಸದಲ್ಲಿ ಆಗಿಂದಾಗ್ಗೆ ತೋರಿ ಬರುತ್ತವೆ. ಆದರೆ ಈ ಭಿನ್ನಶಕ್ತಿಯನ್ನು

# ತಿರುಮಲೆ
## ಶ್ರೀ ವೆಂಕಟೇಶ್ವರಸ್ವಾಮಿ ಅರ್ಚನಾ ಯೋಜನೆ

ಭಕ್ತರು ತಮ್ಮ ಇಷ್ಟದೈವವಾದ ಶ್ರೀ ವೆಂಕಟೇಶ್ವರಸ್ವಾಮಿಯನ್ನು ಅರ್ಚಿಸಲು ಅನುಕೂಲವಾಗುವಂತೆ ತಿರುಮಲೆ ತಿರುಪತಿ ದೇವಸ್ಥಾನದವರು ಹೊಸದಾಗಿ ಬಾಲಾಜೀ ಅರ್ಚನಾ ಯೋಜನೆಯನ್ನು ಆರಂಭಿಸಿದ್ದಾರೆ.

### ಈ ಯೋಜನೆಯಲ್ಲಿ ಸದಸ್ಯರಾಗುವುದು ಹೇಗೆ?

ನೀವು ಮಾಡಬೇಕಾಗಿರುವುದೆಂದರೆ ಇಂಡಿಯನ್ ಓವರ್‌ಸೀಸ್ ಬ್ಯಾಂಕ್ ಮೂಲಕ ತಿ. ತಿ. ದೇ. ಗಳಿಗೆ ರೂ 5586–00 ಸಲ್ಲಿಸುವುದು. ಇದರ ಪ್ರತಿಫಲವಾಗಿ ಹತ್ತು ವರ್ಷಗಳ ಕಾಲ ವರ್ಷಕ್ಕೊಮ್ಮೆ ನೀವು ಬಯಸಿದ ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಅರ್ಚನೆ ಮಾಡುವ ಮಹದ್ಭಾಗ್ಯ ನಿಮ್ಮದಾಗುತ್ತದೆ.

ನೀವು ಸಲ್ಲಿಸಿದ ಹಣ ಹತ್ತು ವರ್ಷಗಳಲ್ಲಿ 15000 ರೂ ಗಳಾಗಿ ಶ್ರೀ ವೆಂಕಟೇಶ್ವರಸ್ವಾಮಿಗೆ ಸೇರುವುದು. ಹಾಗಾಗಿ ಶ್ರೀ ವೆಂಕಟೇಶ್ವರಸ್ವಾಮಿಗೆ ಈ ಮೊತ್ತವನ್ನು ಅರ್ಪಿಸಿದ ತೃಪ್ತಿಯೂ ನಿಮಗೆ ದೊರೆಯುತ್ತದೆ.

### ಸೌಲಭ್ಯಗಳು :

ಅರ್ಚನೆಯ ದಿನದಂದು ದಾನಿಗಳಿಗೆ ತಿರುಮಲೆಯಲ್ಲಿ ವಸತಿ ಸೌಕರ್ಯ ಕಲ್ಪಿಸಲಾಗುತ್ತದೆ. ದಂಪತಿಗಳು ಅರ್ಚನ ಸೇವೆಯಲ್ಲಿ ಪಾಲುಗೊಳ್ಳಬಹುದು. ಕುಟುಂಬದ ಮೂವರಿಗೆ ಸುಪ್ರಭಾತದರ್ಶನ, ಪ್ರತ್ಯೇಕ ದರ್ಶನವುಂಟು. ಜೊತೆಗೇ ಉತ್ತರೀಯ ಅಥವಾ ಕುಪ್ಪುಸದ ಕಣ, ಪ್ರಸಾದಗಳುಂಟು.

**ಕಾರ್ಯನಿರ್ವಹಣಾಧಿಕಾರಿ**
ತಿ. ತಿ. ದೇ.

ದಮನ ಮಾಡಲು, ಕಟ್ಟೆಳೆಯವರು ಮತ್ತು ವಿಜಯನಗರದ ಸಾಮ್ರಾಟರು ಮತ್ತು ಅವರ ಪ್ರತಿನಿಧಿಗಳು ಯಶಸ್ವಿಯಾಗಿ ಪ್ರಯತ್ನಿಸಿದರೆಂದು ಶಾಸನಗಳಿಂದ ತಿಳಿದು ಬರುತ್ತದೆ. ಕಟ್ಟೆಳೆಯವರೆಂದರೆ, ಆ ಪ್ರದೇಶದ ಸಾಮಾಜಿಕ, ಧಾರ್ಮಿಕ ಮತ್ತು ಆರ್ಥಿಕ ನಿಯಮಗಳನ್ನು ಪಾಲಿಸಿಕೊಂಡು ಬರುವ ಸಂಸ್ಥೆ. ಇದರ ಉಲ್ಲೇಖ ಮಂಗಳೂರು, ಬಾರಕೂರು, ಬಸ್ರೂರು, ಭಟ್ಕಳ, ಗೇರುಸೊಪ್ಪೆ ಮತ್ತು ಗೋಕರ್ಣದ ಹಲವಾರು ಶಾಸನಗಳಲ್ಲಿವೆ. ಈ ಕಟ್ಟಳೆಯವರು ಸಾಮಾಜಿಕ ನ್ಯಾಯ ಸ್ಥಾಪಿಸಲು ಪ್ರತ್ಯಕ್ಷ ಸಹಕರಿಸಿ, ನೊಂದ ಜನರನ್ನು ಸಂತೈಸಿದ ವಿಚಾರ ಕನ್ನಡನಾಡಿನ ಶಾಸನಗಳಲ್ಲಿ ಬರುತ್ತವೆ. ಉದಾ:– ಕ್ರಿ. ಶ. 1434ರಲ್ಲಿ ಬಾರಕೂರು ರಾಜ್ಯವನ್ನು ಆಳಿಕೊಂಡಿರುವ ಅಣ್ಣಪ್ಪ ಒಡೆಯನು ಯಾವುದೋ ಕಾರಣದಿಂದ ಶಿವಳ್ಳಿಗ್ರಾಮದ ಮೇಲೆ ದಾಳಿ ಮಾಡಿದನು. ಅದರ ಪರಿಣಾಮವಾಗಿ ಉಡುಪಿಯ ಶ್ರೀಕೃಷ್ಣ ದೇವಸ್ಥಾನದ ಅನ್ಯಮಾನ್ಯಗಳು ತಪ್ಪಿ ಶ್ರೀಕೃಷ್ಣ ದೇವರ ಪ್ರತಿಮೆ ಸ್ಥಳಾಂತರಗೊಂಡು ಪೂಜ ಪುರಸ್ಕಾರಗಳು ನಿಂತುಹೋಗಿದ್ದವು. ಈ ಸಂದರ್ಭ ದಲ್ಲಿ ಬಾರಕೂರಿನ ಕಟ್ಟಳೆಯವರು ಶಿವಳ್ಳಿಗ್ರಾಮ ದವರನ್ನು ಸಂತೈಸಿ, ಶ್ರೀಕೃಷ್ಣದೇವರ ಪೂಜಾ ಕಟ್ಟಳೆ ಯಥಾಸ್ಥಿತಿಗೆ ಹಿಂದಿರುಗುವಂತೆ ಮಾ ಬೇಕೆಂದು ಇವರು ವಿಜಯನಗರದ ಅರಸ ದೇ ರಾಯನಲ್ಲಿ ಬೇಡಿಕೊಳ್ಳುತ್ತಾರೆ. ಕಟ್ಟಳೆಯವ ಮನವಿಯನ್ನು ಮನ್ನಿಸಿ, ಶ್ರೀಕೃಷ್ಣದೇವರ ಪೂಜಾ ಕ್ರಮ ಪುನಃ ನಡೆಯುವಂತೆ ದೇ ವ ರಾ ಯ ನ ಆಜ್ಞೆಯನ್ನಿತ್ತನು. ಇದರಿಂದಾಗಿ ಶಿವಳ್ಳಿ ಗ್ರಾಮದ ಪರಿಸ್ಥಿತಿ ಎಂದಿನಂತೆಯೇ ಸುಧಾರಿಸಿತು ಎಂದು ಬಾರಕೂರಿನ ಶಾಸನ ತಿಳಿಸುತ್ತದೆ. ಕ್ರಿ.ಶ 1430 ರಲ್ಲಿ ಕಟ್ಟಳೆಯವರ ಪ್ರತ್ಯಕ್ಷ ಭಾಗವಹಿ ಸಿದುದ್ದರಿಂದ, ಬಾರಕೂರಿನ ಮೂಡುಗೇರಿ ಮತ್ತು ಚೌಳಕೇರಿಯ ವರ್ತಕರ ಧಾನ್ಯಗಳ ಮಾರಾಟ ವಿಷಯ ತಲೆದೋರಿದ ವಾಜ್ಯ ತೀರ್ಮಾನವಾಗಿ ನಗರದ ದೈನಂದಿನ ಚಟುವಟಿಕೆ ಸಾಂಗವಾ ನಡೆಯಲು ಸಹಾಯಕವಾಯಿತು.

ವಿಜಯನಗರ ಸಾಮ್ರಾಟರು, ಛಿದ್ರಶಕ್ತಿಗ ವಿರುದ್ಧ ಹೋರಾಡಿ ಸಾಮಾಜಿಕ ಸಂಘಟನೆ ಬಹಳ ಶ್ರಮಿಸಿದ್ದರೆಂದು ಇತಿಹಾಸದ ಹಲವಾ ಮೂಲಗಳು ತಿಳಿಸುತ್ತವೆ. ಈ ಸಾಮ್ರಾಟ 'ವರ್ಣಾಶ್ರಮ ಧರ್ಮ ಪ್ರತಿಪಾಲಕ, ಧಮ ಸಂರಕ್ಷಕ'ರೆಂದೇ ಶಾಸನಗಳು ತಿಳಿಸಿ ಸಾಮ್ರಾಜ್ಯದಲ್ಲಿ ವಿವಿಧ ಕೋಮು, ಪಂಗ ಧರ್ಮಗಳೊಳಗೆ ಸೌಹಾರ್ದ ಬರುವಂತೆ ಸಾಮ್ರಾಟರು ಪ್ರಯತ್ನಿಸಿ, ದಕ್ಷಿಣ ಭಾರ ಸಂಸ್ಕೃತಿಗೆ ಒಂದು ರೂಪ ಕೊಡಲು ಕಾರ

ರಾಮರು. ಮಹಮ್ಮದೀಯರನ್ನು ತಮ್ಮ ಸೇನೆಯಲ್ಲಿ ಸೇರಿಸಿಕೊಂಡದ್ದು, ಅವರಿಗೆ ರಾಜಧಾನಿಯಲ್ಲಿ ಬಿಡಾರ ಒದಗಿಸಿಕೊಟ್ಟಿದ್ದು, ಇಸ್ಲಾಂ ಮತದವರಿಗೆ ಪ್ರಾರ್ಥನಾಮಂದಿರ ತಮ್ಮ ರಾಜ್ಯದಲ್ಲಿ ಕಟ್ಟಿಸಿಕೊಟ್ಟಿದ್ದು, ಇವೆಲ್ಲಾ ಈ ರಾಜ್ಯದಲ್ಲಿ ಹಿಂದು-ಮುಸ್ಲಿಂ ಧರ್ಮದವರ ಹಿತಕರ ಸಂಬಂಧಕ್ಕೆ ಸಹಕಾರಿಯಾಗಿ, ಇವರಿಬ್ಬರೊಳಗೆ ಭಾವನಾತ್ಮಕ ಐಕ್ಯ ಬೆಳೆಯಲು ಒಂದು ಆಸ್ಪದ ಉಂಟಾಯಿತು. ಈ ಧೋರಣೆಯಿಂದಾಗಿ, ಎರಡು ಧರ್ಮದವರ ನಡುವೆ ನೈಜ್ಯ ಸೌಹಾರ್ದ ಬೆಳೆಯುತ್ತಾ ಬಂದು, ಅದರ ಪರಿಣಾಮವಾಗಿ ಕರ್ನಾಟಕದಲ್ಲಿ ಇವರಿಬ್ಬರ ಜಾತಿ – ಕಲಹಗಳು ಕಡಿಮೆಯಾಯಿತೆಂದರೆ ಅತಿಶಯೋಕ್ತಿಯಾಗಿರಲಿಕ್ಕಿಲ್ಲ. ಕೆಲವು ಸಲ ಧಾರವಾಡ ಜಿಲ್ಲೆಯ ಯಮನೂರು, ಚಿಕ್ಕಮಗಳೂರು, ಬಾಬಾಬುಡಾನಗಿರಿಯಂಥಾ ಸ್ಥಳಗಳ ದೈವಗಳಿಗೆ ಹಿಂದೂ – ಮಹಮ್ಮದೀಯರಿಬ್ಬರೂ ಪೂಜೆ ನಡೆಸುತ್ತಾರೆ. ಜಾತಿಯ ಕಲಹಗಳು ಅಕಸ್ಮಾತ್ ಬಂದಾಗ, ವಿಜಯನಗರದ ಸಾಮ್ರಾಟರು ಅಥವಾ ಅವರ ಅಧಿಕಾರಿಗಳು ತಕ್ಷಣ ಕಾರ್ಯವೆಸಗಿ ಜಾತಿಯ ಕಲಹಗಳನ್ನು ತಡೆಗಟ್ಟುತ್ತಿದ್ದರು. ಇವರ ಸೂಕ್ತ ಕ್ರಮದಿಂದಾಗಿ, ಜಾತೀಯ ಸೌಹಾರ್ದ ಬೆಳೆಯಿತು. ಕ್ರಿ. ಶ. 1368ರಲ್ಲಿ ವೈಷ್ಣವ–ಜೈನರ ಘರ್ಷಣೆಯನ್ನು, ವಿಜಯನಗರದ ಸಾಮ್ರಾಟ, ಬುಕ್ಕರಾಯನು ಪ್ರತ್ಯಕ್ಷ ಮಧ್ಯ ಪ್ರವೇಶಿಸಿ, ಈ ಘರ್ಷಣೆಯನ್ನು ಶಮನಮಾಡಿದ್ದು ಕರ್ನಾಟಕದ ಇತಿಹಾಸದಲ್ಲಿ ಮರೆಯಲಾರದ ಘಟನೆ. ಇಂದಿನ ಭಾರತದಲ್ಲಿಯ ಹಗೆಯ ಹವಣಿಕೆಯುಳ್ಳ ಜಾತಿ–ಪಂಥಗಳಿಗೆ ಭಾರತ ಸಂಸ್ಕೃತಿಯ ಆತ್ಮವಾದ ಮೂಲಭೂತವಾದ ಐಕ್ಯ, ಘನಸಂಬಂಧಗಳನ್ನು ಸಾಧಿಸಲು, ಬುಕ್ಕರಾಯನ ತೀರ್ಮಾನ ಒಂದು ಪ್ರಮುಖ ಪ್ರಯತ್ನವಾಗಿದೆ.

ಮಂಗಳೂರಿನಲ್ಲಿ ಮುಸ್ಲಿಂರಿಗಾದ ಹಿಂಸೆ, ಅನ್ಯಾಯವನ್ನು ವಿಜಯನಗರ ಪ್ರತಿನಿಧಿ ಬಾಚಣ್ಣ ದಂಡನಾಯಕನು ಹೋಗಲಾಡಿಸಿ, ಅಲ್ಲಿ ಮತೀಯ ಸೌಹಾರ್ದ ಬೆಳೆಯುವಂತೆ ಮಾಡಿದನು. ಕ್ರಿ. ಶ. 1550ರಲ್ಲಿ ಕೋಟೇಶ್ವರದ ತುಡಿ ಹಬ್ಬ ಆಚರಿಸುವಾಗ, ಯಾವುದೋ ಕಾರಣದಿಂದ ಜನರು ತಮ್ಮ ತಮ್ಮೊಳಗೆ ಕಾದಾಡಿ ಬ್ರಾಹ್ಮಣರ ಮತ್ತು ಶೂದ್ರರ ಹೆಣಗಳು ದೇವಸ್ಥಾನದೊಳಗೆ ಬಿದ್ದು, ಗೋಹತ್ಯವಾಗಿ ದೇವಸ್ಥಾನದ ಧಾರ್ಮಿಕ ಕಟ್ಟಳೆ ನಿಂತು ಹೋಯಿತು. ಈ ಅಶಾಂತ ಪರಿಸ್ಥಿತಿಯಲ್ಲಿ ವಿಜಯನಗರದ ಬಾರಕೂರು ರಾಜ್ಯಪಾಲಕ, ಮುಸ್ಲಿಂ ಧರ್ಮದವನಾದ ವಿಕದಲ್‌ಖಾನ ಈ ಜಾತಿಯ ಕಲಹವನ್ನು ಬಗೆಹರಿಸಿ, ದೇವಸ್ಥಾನದಲ್ಲಿ ಪೂಜಾವಿನಿಯೋಗ ತಿರುಗಿ ನಡೆಯುವಂತೆ ಮಾಡಿದನೆಂದು ಕೋಟೇಶ್ವರದ ಒಂದು ಶಾಸನ ತಿಳಿಸುತ್ತದೆ. ಈ ಎಲ್ಲಾ ಕಾರ್ಯಗಳು ಕನ್ನಡನಾಡಿನವರ ಸಂಘಟನೆ ತರುವಲ್ಲಿ ಬಹಳ ಸಹಕಾರಿಯಾಗಿದೆ.

ಕನ್ನಡಿಗರು ಭಾವನಾತ್ಮಕ ಭಾರತ ಐಕ್ಯವನ್ನು ವ್ಯಕ್ತಪಡಿಸಿದ್ದು, ಭಾರತದ ಇತಿಹಾಸದಲ್ಲಿ ಒಂದು ಮರೆಯಲಾಗದ ಘಟನೆ. ಈ ಭಾವನಾತ್ಮಕ ಭಾರತ ಐಕ್ಯತೆಯನ್ನು ಕನ್ನಡಿಗರು ಭಾರತದ ಪುಣ್ಯಸ್ಥಳಗಳನ್ನು ಸಂದರ್ಶಿಸಿ, ಅಲ್ಲಿನ ನದಿಗಳಲ್ಲಿ ಸ್ನಾನಮಾಡಿ, ದೇವಾಲಯಗಳಲ್ಲಿ ಧಾರ್ಮಿಕ ಕರ್ತವ್ಯ ಮಾಡುವಾಗಲೂ ಮತ್ತು ದಾನಶಾಸನದ ಅಂತ್ಯದಲ್ಲೂ ವ್ಯಕ್ತಪಡಿಸುತ್ತಿದ್ದರು. ಕನ್ನಡಿಗರು ಕಾಶಿ, ರಾಮೇಶ್ವರ, ತಿರುಪತಿ, ಬದರಿ, ಪುರಿ, ದ್ವಾರಕಾ ಸ್ಥಳಗಳನ್ನು ಸಂದರ್ಶಿಸಿ, ಅಲ್ಲಿ ದಾನಮಾಡಿದ ವಿಚಾರ ಶಾಸನಗಳಲ್ಲಿ ತಿಳಿಸಿದ್ದಲ್ಲದೇ, ತಾವು ಈ ಸ್ಥಳಗಳನ್ನು ಸಂದರ್ಶಿಸಿ, ಪುಣ್ಯವಂತರಾದರೆಂದು, ತಾವೂ ಭಾರತದ ಅವಿಭಾಜ್ಯ ಅಂಗವೆಂದೂ ವ್ಯಕ್ತಪಡಿಸಿದ್ದರು. ದಾನ ಬಿಟ್ಟ ಸ್ಥಳ ಅಥವಾ ಹಣವನ್ನು ಅಪಹರಿಸಿದರೆ ಕಾಶೀ, ರಾಮೇಶ್ವರ, ಶ್ರೀಶೈಲ, ತಿರುಪತಿ ಮತ್ತು ಊರ್ಜಂತಗಿರಿಗಳಲ್ಲಿ ಗೋ–ಬ್ರಾಹ್ಮಣರ ಕೊಂದ ಪಾಪ ಬರುವುದೆಂದು ಶಾಸನಗಳು ಎಚ್ಚರಿಸಿವೆ. ಇವು ಸಮಗ್ರ ಭಾರತದ ಭಾವನಾತ್ಮಕ ಐಕ್ಯತೆಯನ್ನು ಪ್ರೇರಿಸುವಂತಹದಾಗಿದೆ. ಈ ಸಂದರ್ಭದಲ್ಲಿ ಕಾಪುವಿನ ಶಾಸನದ ಉಕ್ತಿ ಇಲ್ಲಿ ತಿಳಿಸುವುದು ಸಮಂಜಸವಾಗಿದೆ. ಕ್ರಿ. ಶ. 1556ರ ಈ ಶಾಸನ ಈ ಪ್ರದೇಶವನ್ನು ಆಳಿಕೊಂಡಿದ್ದ ಮರ್ದ್ದ ಹೆಗ್ಡೆ ಧರ್ಮನಾಥ ಬಸದಿಗೆ ನೀಡಿದ ದಾನಶಾಸನ. ಈ ಶಾಸನದ ಕೊನೆಯಲ್ಲಿ, ಈ ದಾನವನ್ನು ಜೈನರು ಉಲ್ಲಂಘಿಸಿದರೆ, ಬೆಳಗೊಳದ ಗೊಮ್ಮಟ, ಕೊಪಣದ ಚಂದ್ರನಾಥ, ಊರ್ಜಂತಗಿರಿಯ ನೇಮೀಶ್ವರ ವಿಗ್ರಹಗಳನ್ನು ಒಡೆದ ಪಾಪ, ಅದೇ ರೀತಿಯಲ್ಲಿ ಶೈವನಾದರೆ, ಶಿವಲಿಂಗಗಳನ್ನು ಕಾಶಿ, ಶ್ರೀಪರ್ವತ, ಗೋಕರ್ಣ ಇತ್ಯಾದಿ ಪುಣ್ಯಸ್ಥಳಗಳಲ್ಲಿ ಛಿದ್ರಗೊಳಿಸಿದ ಪಾಪ, ವೈಷ್ಣವನಾದರೆ, ವಿಷ್ಣು ವಿಗ್ರಹಗಳನ್ನು ತಿರುಪತಿ, ಇನ್ನಿತರ ವೈಷ್ಣವ ಕ್ಷೇತ್ರಗಳಲ್ಲಿ ಹಾಳುಗೆಡವಿದ ಪಾಪಕ್ಕೆ ಗುರಿಯಾಗುವರು ಎಂದು ಎಚ್ಚರಿಸಿದೆ. ಇದರಲ್ಲಿ ತಿಳಿದು ಬರುವ ಮುಖ್ಯ ಸಂಗತಿಗಳೆಂದರೆ, ಕಾಪುವಿನಲ್ಲಿ ಆಳಿಕೊಂಡಿದ್ದ ರಾಜ, ತನ್ನ ಆಳ್ವಿಕೆ ಪ್ರದೇಶವನ್ನು ಭಾರತದ ಪ್ರಮುಖ ಪವಿತ್ರಸ್ಥಳಗಳೊಂದಿಗೆ ಸಂಯೋಜಿಸಿಕೊಂಡದ್ದು ಮತ್ತು ಶಾಸನಗಳಲ್ಲಿ ಉಕ್ತವಾದ ಶ್ರೀಪರ್ವತ, ಕಾಶಿ, ಗೋಕರ್ಣ, ತಿರುಪತಿ, ರಾಮೇಶ್ವರ ಸ್ಥಳಗಳ ಪವಿತ್ರತೆಯನ್ನು ಇಲ್ಲಿನ ಜನರಿಗೆ ತಿಳಿಯುವಂತೆ ಮಾಡಿದ್ದು. ಇದೇ ರೀತಿಯಲ್ಲಿ, ಕನ್ನಡನಾಡಿನಲ್ಲಿ ಆಳಿದ ಮುಸ್ಲಿಂ ಅರಸರು ತಮ್ಮ ಜನರನ್ನು ಅರಿಕೆ ಮಾಡಿಕೊಳ್ಳುತ್ತಿದ್ದರು. ಉದಾ:– ಅಜ್ಜಿಗೇರಿಯ 1651ರ ಶಾಸನ. ಕಲಿತನ ಸೀಮೆ ಮುಸ್ಲಿಂ ಅಧಿಕಾರಿ ಹಮುಬಾಜೆ ಬುಡ್ಡಿಮದಾರರಿಗೆ ಕವುಲು ಕೊಟ್ಟಾಗ, ಇದನ್ನು ಯಾರಾದರೂ ಉಲ್ಲಂಘಿಸಬಾರದೆಂದು, ತಮ್ಮ ಹಿಂದೂ–ಮುಸ್ಲಿಂ ಪ್ರಜೆಗಳಿಗೆ ಕೇಳಿಕೊಳ್ಳುತ್ತಾನೆ. ಒಂದು ವೇಳೆ ಇದನ್ನು ಬ್ರಾಹ್ಮಣರು ಉಲ್ಲಂಘಿಸಿದರೆ, ಕಾಶಿಯಲ್ಲಿ ಗೋಹತ್ಯೆ ಮಾಡಿದ ಪಾಪ, ಶೂದ್ರನಾದರೆ, ಶ್ರೀಶೈಲದಲ್ಲಿ ಬ್ರಾಹ್ಮಣರ ಕೊಂದ ಪಾಪ, ಬರುವುದೆಂದು ಎಚ್ಚರಿಕೆ ನೀಡಿದೆ. ಈ ರೀತಿ ಶಾಸನಗಳಲ್ಲಿ ನಿರೂಪಿಸಿದ ಎಚ್ಚರಿಕೆಯ ಹೇಳಿಕೆ, ಕನ್ನಡಿಗರನ್ನು ಭಾವನಾತ್ಮಕವಾಗಿ ಐಕ್ಯರಾಗಲು ಪ್ರಚೋದಿಸಿತು.

ಕನ್ನಡನಾಡಿನ ಹಲವಾರು ಶಾಸನಗಳಲ್ಲಿ; ಈ ನಾಡು ಭಾರತದ ಅವಿಭಾಜ್ಯ ಅಂಗವೆಂದು ಹೇಳಿದ್ದು ಭಾವನಾತ್ಮಕ ಐಕ್ಯಕ್ಕೆ ಸಹಕಾರವಾಯಿತು. ಉದಾ:– ಕ್ರಿ. ಶ. 1408ರ ಕುಪಟೂರಿನ ಶಾಸನವು ಭಾರತ – ಕರ್ನಾಟಕದ ಸಂಯೋಜನೆ ಈ ರೀತಿ ತಿಳಿಸುತ್ತದೆ. "ಗರ್ಜಿಸುವ ಸಾಗರಗಳ ಅಲೆಗಳ ಹೊಡೆತ, ಮತ್ತು ರತ್ನಗಳಿಂದ ಆವರಿಸಲ್ಪಟ್ಟಿದೆ, ಜಂಬುದ್ವೀಪ. ಅದರ ಮಧ್ಯದಲ್ಲಿದೆ, ಮೇರು ಪರ್ವತ. ಈ ಪರ್ವತದ ದಕ್ಷಿಣದಲ್ಲಿದೆ, ಭರತಖಂಡ. ಈ ಭರತಖಂಡದಲ್ಲಿರುವ ರಾಜ್ಯಗಳಲ್ಲಿ ಕರ್ನಾಟಕವೇ ಅತ್ಯಂತ ಸೌಂದರ್ಯದ ರಾಷ್ಟ್ರ". ಇದೇ ರೀತಿ ಕಾಯ್ಕಿಣೀ ಶಾಸನವು ವಾರಾಸಿ ಬಳಸಿಂದ ಶೋಭಿಸುವುದೀ ಜಂಬುದ್ವೀಪಮುಂ. ಮೇರು ಕ್ಷ್ಮಾಧರ ಮಧ್ಯಮಂತದ ತೆಂಕಲ್ಭಾರತ ಕ್ಷೇತ್ರಗಳಿಂ, ಕಾಸಾರ, ಸುಕ್ಷೇತ್ರದಿಂದಾರ್ಯಾಖಂಡ, ವೆನ್ನುತ್ತ ಇಲ್ಲಿ ಕರ್ನಾಟಕ ಮತ್ತು ತೌಳವ ದೇಶದ ವಿಚಾರ ತಿಳಿಸಿದೆ. ಇದೇ ರೀತಿ ಭಾರತ-ಕರ್ನಾಟಕದ ಭಾವನಾತ್ಮಕ ಏಕೀಕರಣವನ್ನು ಮೂಡಬಿದ್ರೆ, ಗೇರಸೊಪ್ಪೆ, ಸಂಗೀತಪುರ, ಭಟ್ಕಳದ ಶಾಸನಗಳಲ್ಲಿ ನೋಡಬಹುದು.

ಕರ್ನಾಟಕದ ಧಾರ್ಮಿಕ ಶಕ್ತಿ ಇಲ್ಲಿನ ಸಾಮಾಜಿಕ ಐಕ್ಯತೆಗೆ ಪ್ರಚೋದಿಸಿ, ಕರ್ನಾಟಕ– ಭಾರತದ ಭಾವನಾತ್ಮಕ ಐಕ್ಯತೆಗೆ ಬಹಳ ಸಹಕಾರಿಯಾಗಿದೆ. ಇದು ಕರ್ನಾಟಕ ಸಂಸ್ಕೃತಿಯ ಹಿರಿಮೆ.



# ಸಪ್ತಗಿರಿ

## ತಿ.ತಿ.ದೇ. ಗಳ ಸಚಿತ್ರ ಮಾಸಪತ್ರಿಕೆ

ತಿರುಮಲೆ ತಿರುಪತಿ ದೇವಸ್ಥಾನಗಳ ವತಿಯಿಂದ ಹೊರಬರುತ್ತಿರುವ ಸಚಿತ್ರ ಮಾಸಪತ್ರಿಕೆ ಸಪ್ತಗಿರಿ ಧಾರ್ಮಿಕ ಸಾಂಸ್ಕೃತಿಕ ವಿಷಯಗಳಿಗೆ ಮೀಸಲಾಗಿ ಕನ್ನಡ, ತೆಲುಗು, ತಮಿಳು, ಆಂಗ್ಲ, ಹಿಂದಿ ಭಾಷೆಗಳಲ್ಲಿ ವೈವಿಧ್ಯದೊಡನೆ ಏಕತೆಯನ್ನುಳಿಸಿಕೊಂಡು ದಿನೇ ದಿನೇ ಜನಪ್ರಿಯವಾಗುತ್ತಿದೆ. ಸಪ್ತಗಿರಿಯ ಕರ್ನಾಟಕ ಪ್ರಾಂತ್ಯದ ಏಜಂಟರ ಪಟ್ಟಿ ಕೆಳಕಂಡಂತಿದೆ.

ಎಸ್. ರಾಮಕೃಷ್ಣಯ್ಯ
ಶ್ರೀ ಮಾರುತಿ ಕಾಫಿ ವರ್ಕ್ಸ್
ಸ್ಟೇಷನ್ ರಸ್ತೆ, ಹೊಸಪೇಟೆ.

ಕೆ. ವಿಜಯಕುಮಾರ್
ಭವಾನಿಶಂಕರ್ ಏಜನ್ಸಿ
ಕೆ.ಎಂ. ಹಳ್ಳಿ, ಕೂಡ್ಲಿಗಿ.

ಸಿ.ಪಿ. ರಾಮಕೃಷ್ಣ
ಜವಳಿ ವ್ಯಾಪಾರಿಗಳು
ಚಾಮರಾಜನಗರ.

ಸಿ. ಸತ್ಯನಾರಾಯಣ
ಬಾಲಾಜಿ ಏಜನ್ಸೀಸ್
18, ಹಳೆಕಚೇರಿ ರಸ್ತೆ, ಬಳ್ಳಾರಿ.

ಎನ್. ಶ್ರೀಕಂಠಯ್ಯ
ಶ್ರೀಸಿಧಿ ಸ್ಟೋರ್ಸ್, ಕರ್ನಾಟಕ ಸಂಘ ರಸ್ತೆ
ಜಾಲಹಳ್ಳಿ, ಬೆಂಗಳೂರು.

ಎಸ್.ವಿ. ಕೃಷ್ಣಮೂರ್ತಿ
447, ಗುರುಕೃಪಾ
ಸುಬ್ಬರಾಯ ಪೇಟೆ, ಚಿಕ್ಕ ಬಳ್ಳಾಪುರ.

ವೆಂಕಟೇಶ ಶಿವಾಜಿ ಝಿಂಗಾಡೆ
ರಾಮಕೃಷ್ಣ ರೆಡಿಮೇಡ್ ಸ್ಟೋರ್ಸ್
ಮುದ್ದೇಬಿಹಾಳ, ಬಿಜಾಪುರ.

ವಿ.ಎಸ್. ಗೋಪಾಲಕೃಷ್ಣ
ಬೃಂದಾವನ ಸ್ಟೋರ್ಸ್
10/125. 9ನೇ ಮೇನ್ 3ನೇ ಬ್ಲಾಕ್
ಜಯನಗರ, ಬೆಂಗಳೂರು.

ಕೆ.ಎಸ್. ವೆಂಕಟಾಚಲಪತಿಶೆಟ್ಟಿ
ರಮೇಶ್ ಸ್ಟೋರ್ಸ್
ಕುಣಿಗಲ್.

ಆರ್.ಜಿ. ಏಜನ್ಸಿ
ಸೋಮವಾರಪೇಟೆ
ರಾಯಚೂರು.

ಡಿ. ಗೋಪಾಲಶೆಟ್ಟಿ
ನ್ಯೂಸ್ ಏಜಂಟ್
ಶಿವಾನಂದಸ್ಟೋರ್ಸ್. ಮದ್ದೂರು.

ಬಿ.ಕೆ. ವೆಂಕಟೇಶನ್
ಆಡಿಟರ್, 1759, 9ನೇ ಕ್ರಾಸ್
ತುಮಕೂರು.

ಬಿ.ಎಸ್. ಭಟ್
ಉದಯವಾಣಿ ಏಜಂಟ್
ಕಾಳೇಶ್ವರ.

ಸುಬ್ಬಾರಾವ್
ನ್ಯೂಸ್ ಏಜಂಟ್, ಆಸ್ಪತ್ರೆರಸ್ತೆ
ಮಧುಗಿರಿ.

ವೈ.ಎಸ್. ಮಲ್ಲಿಕಾರ್ಜುನ ಶೆಟ್ಟಿ
ಸ್ಟೇಟ್‌ಬ್ಯಾಂಕ್ ಆಫ್ ಮೈಸೂರ್ ಬಳಿ
ಕೂಡ್ಲಿಗಿ.

ವೆಂಕಟೇಶ್ವರ ಕಾಫಿವರ್ಕ್ಸ್, ಅಂಡ್ ಬುಕ್‌ಡಿಪೋ
ಜಯಲಕ್ಷ್ಮಿ ಬಿಲ್ಡಿಂಗ್ಸ್, 610 ಬಸ್‌ಸ್ಟಾಂಡ್ ರಸ್ತೆ
ಮಂಡ್ಯ.

ಪಿ.ಎಸ್. ನಾಗರತ್ನಮ್ಮ
W/o ಪಿ.ಸತ್ಯನಾರಾಯಣ,ನಟೇಶ್‌ಕಾಂಪೌಂಡ್
ಬಂಗಾರಪೇಟೆ.

ಆನಂದರಾವ್. ನಿವೃತ್ತ ಉಪಾಧ್ಯಾಯರು
ಶಿವಪ್ಪ ನಾಯಕನಗರ
ಸಾಗರ.

ಎಸ್. ರತ್ನಮ್ಮ
ಸಲ್ಲಾಪುರ. ತರೀಕೆರೆ.

ಎಂ.ಎಸ್. ಕೃಷ್ಣಮೂರ್ತಿ
ಉತ್ತರಾದಿಮಠ
ಚಿತ್ರದುರ್ಗ.

ಶ್ರೀಮತಿ ಬಿ.ಎಚ್. ಕಟ್ಟಿ
ಉಪ್ಪಳ ಬುರುಜು ಹಿಂಭಾರದಗಸ್ತಿ
ಬಿಜಾಪುರ.

ಎಸ್. ಮೂಡಲಗಿರಿರಾಜ
S/o ಶ್ರೀ ರಂಗಶೆಟ್ಟಿ,ಸಪ್ತಗಿರಿ ನಿಲಯ
ಭರಮಸಾಗರ.

ಶ್ರೀಮತಿ ರಾಜಗುರು
c/o ಡಿ.ಎಸ್.ಆರ್. ರಾಜಗುರು
ಸರ್ಕಾರಿ ಜೂನಿಯರ್‌ಕಾಲೇಜು, ಮಾನವಿ

ವಿ.ಎಸ್. ಭಾಗ್ಯರಾಜಶೆಟ್ಟಿ
ಹುಲಿಕಲ್ಲು,ಅರಕಲಗೂಡು(ತಾ)
ಹಾಸನ.

ಕೆ.ಎಂ. ಶ್ರೀನಿವಾಸಮೂರ್ತಿ
ಪತ್ರಕರ್ತರು.ಓಲ್ಡ್ ಟೌನ್
ಭದ್ರಾವತಿ.

ಎ.ಎಂ. ಶ್ರೀನಿವಾಸ್.
ವಿನಾಯಕ ಟೈಲರ್ಸ್ ದೊಡ್ಡಪೇಟೆ
ಕೋಲಾರ.

ಟಿ.ಬಸಪ್ಪ
ಶ್ರೀರಾಮ ಭಾವಸಾರಕ್ಷತ್ರಿಯಕೋ-ಆಪ-ಸೊಸೈಟಿ
ತುಳಜಾಭವಾನಿರಸ್ತೆ, ಶಿವಮೊಗ್ಗ.

ಹನುಮಂತರಾವ್ ಕುಲಕರ್ಣಿ
ನ್ಯೂಸ್ ಏಜಂಟ್,ಬಸ್‌ಸ್ಟಾಂಡ್‌ರೋಡ್
ಗಂಗಾವತಿ.

ಆರ್.ಶೇಷಾದ್ರಿ. ಅರ್ಚಕರು,
ಶ್ರೀಲಕ್ಷ್ಮೀನಾರಾಯಣಸ್ವಾಮಿದೇವಾಲಯ
ಕೊಳ್ಳೇಗಾಲ.

ಬಿ.ಎಸ್. ಮುಕುಂದ
1275,ಶ್ರೀಪಾದರಾಜ ಮಠದ ಎದುರು
ಮುಳಬಾಗಿಲು.

ಕೆ.ಎಸ್. ಲಕ್ಷ್ಮೀಕಾಂತ
ಎನ್.ಎ. 93 ಬಿ.ಇ.ಎಲ್. ಕಾಲೋನಿ
ಜಾಲಹಳ್ಳಿ, ಬೆಂಗಳೂರು.

ಟಿ.ಕೆ. ರಾಮಸ್ವಾಮಿ
ತಿರುಪತಿ ವೆಂಕಟೇಶ್ವರ ಸೈಕಲ್‌ಷಾಪ್
ಬಿ.ಎಚ್. ರೋಡ್, ತರೀಕೆರೆ.

ಪ್ರೇಮಾವತಿ
W/o ಪಿ ಸಾರಂಗಪಾಣಿ. ರೋಜರ್ಸ್ ಕ್ಯಾಂಪ್
ಬಿ.ಪಿ. ಬ್ಲಾಕ್
ಮಾರಿಕುಪ್ಪಂ ಕೆ.ಜಿ.ಎಫ್.

ಡಿ. ಗೋಪಾಲಶೆಟ್ಟಿ
ಮದ್ದೂರು.

ಆರ್.ವಾಸುದೇವಶೆಟ್ಟಿ
ದಳಸನೂರು.

ಏಜಂಟರಿಲ್ಲದ ಕಡೆ ಏಜಂಟರು ಬೇಕಾಗಿದ್ದಾರೆ. ಆತ್ಯಾಕರ್ಷಕ ಕಮೀಷನ್ ಉಂಟು. ಕೂಡಲೇ ವ್ಯವಹರಿಸಿ.

**ವೆಲ್‌ಫೇರ್ ಆಫೀಸರ್. ತಿ.ತಿ.ದೇ. ತಿರುಪತಿ.**

(8ನೇ ಪುಟದಿಂದ)

ಮಾಡುವುದಕ್ಕೆ ಸಹಾಯಕವಾದುದು. ಇದರಲ್ಲಿ ಫಲಭಾಗವಾವುದೂ ಇಲ್ಲ. ಬ್ರಾಹ್ಮಣ ಆರಣ್ಯಕಗಳಲ್ಲಿಯೂ ಜ್ಯೋತಿಷ್ಯಕ್ಕೆ ಸಂಬಂಧಪಟ್ಟ ಕೆಲವು ವಿಷಯಗಳು ಅಲ್ಲಲ್ಲಿ ಉಕ್ತವಾಗಿವೆ. ಅದೇ ರೀತಿಯಲ್ಲಿ ಇವೂ ಯೋಗ್ಯವಾದ ಕಾಲದ್ಯೋತಕಗಳು ಮಾತ್ರ. ಈ ಭಾಗಕ್ಕೆ ಸಂಬಂಧಪಟ್ಟ ಹಾಗೆ ಪ್ರಾಚೀನವಾದ ವೇದಾಂಗ ಜ್ಯೋತಿಷ್ಯವೆಂಬ ಒಂದು ಸಣ್ಣ ಗ್ರಂಥವಿದೆ. ಇದು ಯಜ್ಞಯಾಗಾದಿಗಳನ್ನು ಮಾಡಲು ಸೂಕ್ತವಾದ ಶುಭ ಕಾಲಗಳನ್ನು ಸೂಚಿಸುವುದು.

ವೈದಿಕ ಸಾಹಿತ್ಯಕ್ಕೆ ನೇರವಾಗಿ ಸಂಬಂಧ ಪಡೆದಿದ್ದರೂ ಅವುಗಳ ಅಭ್ಯಾಸಕ್ಕೆ ವಿಶೇಷ ಸಹಾಯಕವಾದ ಅನುಕ್ರಮಣಿಗಳೂ ಈ ಜಾತಿಗೆ ಸೇರಿದುವು. ಇವುಗಳಲ್ಲಿ ಕಾತ್ಯಾಯನಕೃತ 'ಸರ್ವಾನುಕ್ರಮಣಿ'ಯು ಋಗ್ವೇದ ಸೂಕ್ತಗಳ ಅದಿಶಬ್ದ. ಸೂಕ್ತಗಳ ಸಂಖ್ಯೆ, ಋಷಿ, ದೇವತೆ, ಛಂದಸ್ಸು ಮೊದಲಾದುವುಗಳ ವಿವರವನ್ನು ಕ್ರಮವಾಗಿ ಸೂಚಿಸುವುದು. ಸರ್ವಾನುಕ್ರಮಣಿಯ ವ್ಯಾಖ್ಯಾನವಾದ 'ಪದಾರ್ಥ ದೀಪಿಕೆ'ಯಲ್ಲಿ ವ್ಯಾಖ್ಯಾನಕಾರನಾದ ಸದ್ಗುರು ಶಿಷ್ಯನು ಕಾತ್ಯಾಯನರಿಗಿಂತ ಹಿಂದೆ ಶೌನಕೋಕ್ತವಾದ ಪ್ರತ್ಯೇಕವಾದ ಋಷ್ಯನುಕ್ರಮಣಿ, ಛಂದೋನುಕ್ರಮಣಿ, ದೇವತಾನುಕ್ರಮಣಿ, ಅನುವಾಕಾನುಕ್ರಮಣಿ, ಮಂತ್ರಾನುಕ್ರಮಣಿ – ಮೊದಲಾದುವಿದ್ದವೆಂದು ಹೇಳುತ್ತಾನೆ. ಶೌನಕೋಕ್ತವಾದ ಪ್ರತ್ಯೇಕವಾದ 'ಬೃಹದ್ದೇವತೆ'ಯು ಮತ್ತೊಂದು ಉತ್ತಮ ಅನುಕ್ರಮಣಿ, ಯಜುರ್ವೇದದ ತೈತ್ತಿರೀಯದ ಆತ್ರೇಯ ಶಾಖೆಗೊಂದು, ಚಾರಾಯಣೀಯ, ಶಾಖೆಗೊಂದು, ವಾಜಸನೇಯರ ಮಾಧ್ಯಂದಿನ ಶಾಖೆಗೊಂದು – ಈ ರೀತಿಯಾಗಿ ಮೂರು ಅನುಕ್ರಮಣಿಗಳಿವೆ. 'ಆರ್ಷೇಯ ಅನುಕ್ರಮಣಿ' ಸಾಮವೇದಕ್ಕೆ ಸಂಬಂಧಪಟ್ಟುದು, ಅಥರ್ವವೇದಕ್ಕೆ 'ಬೃಹತ್ಸರ್ವಾನುಕ್ರಮಣಿ' ಎಂಬುದಿದೆ.

ಇದೇ ಜಾತಿಗೆ ಸೇರಿದುವು 'ಪರಿಶಿಷ್ಟ'ಗಳು. ಇವುಗಳು ವೇದಗಳ ಶಾಖೆಗಳ ವಿವರಗಳನ್ನು ತಿಳಿಸುವುವು. ಇವುಗಳಲ್ಲಿ 'ಚರಣವ್ಯೂಹ'ವು ಪ್ರಸಿದ್ಧವಾದುದು. ಇವು ಸೂತ್ರಗಳಿಗಿಂತ ವಿಸ್ತಾರವಾಗಿವೆ. ಸಾಮಾನ್ಯವಾಗಿ ಅನುಷ್ಟುಪ್ ಛಂದಸ್ಸಿನಲ್ಲಿವೆ. ಆದರೂ ಆಕರ್ಷಕವಾಗಿವೆ. ಇವುಗಳನ್ನು ವೇದಸಾಹಿತ್ಯದ ಕೊನೆಯ ಭಾಗವೆಂದು ಪರಿಗಣಿಸಬಹುದು.

## ವೇದಭಾಷ್ಯಗಳು :

ಇಷ್ಟಾದರೂ ಆದಿಕಾಲದಿಂದ ವೇದಗಳ ನಿಷ್ಕೃಷ್ಟಾರ್ಥ ವಿವರಣೆಗಾಗಿ ವೇದಗಳಿಗೆ ವ್ಯಾಖ್ಯಾನಗಳು ರಚಿತವಾಗಿವೆ.

ವೇದಗಳಿಗೆ ಅತಿಪ್ರಾಚೀನ ಕಾಲದಿಂದ ಅರ್ಥ ವಿವರಣೆಯ ಪ್ರಯತ್ನ ಮಾಡಿರುವುದು ಬ್ರಾಹ್ಮಣಗಳಲ್ಲಿಯೇ ಕಂಡು ಬರುತ್ತದೆ. ಕಾಲಕ್ರಮೇಣ ಬ್ರಾಹ್ಮಣಗಳೂ ವೇದಗಳೆಂದು ಪರಿಗಣಿಸಲ್ಪಟ್ಟಿರುವುದರಿಂದಲೂ ವೇದಾರ್ಥಗಳ ಅಲ್ಲದೆ ಇತರ ವಿಷಯಗಳನ್ನೊಳಪಟ್ಟಿರುವುದರಿಂದಲೂ ಬ್ರಾಹ್ಮಣಗಳನ್ನು ವೇದಭಾಷ್ಯವೆಂದು ಕರೆಯುವುದು ಸಮಂಜಸವಾಗಿ ಕಾಣುವುದಿಲ್ಲ.

ಬ್ರಾಹ್ಮಣಗಳನ್ನು ಬಿಟ್ಟರೆ ವೇದಾರ್ಥ ಮೊದಲು ಮಾಡುವುದು ನಿರುಕ್ತಕಾರರಾದ ಯಾಸ್ಕರು. ಈ ಯಾಸ್ಕರು ತಮಗಿಂತಲೂ ಹಿಂದಿನ ಅನೇಕ ಭಾಷ್ಯಕಾರರನ್ನು ಉದಹರಿಸಿರುವುದರಿಂದ ಇವರಿಗಿಂತಲೂ ಪ್ರಾಚೀನರಾದ ಅನೇಕ ಭಾಷ್ಯಕಾರರಿದ್ದಿರಬಹುದು. ಆದರೆ ಅವರ ಗ್ರಂಥಗಳು ನಮಗೆ ದೊರೆತಿಲ್ಲ. ದೊರೆಯುವ ಸಂಭವವೂ ಇಲ್ಲ. ಆದುದರಿಂದ ಯಾಸ್ಕರೇ ಮೊದಲನೆಯ ಭಾಷ್ಯಕಾರರೆಂದು ಪರಿಗಣಿಸಬಹುದು. ಇವರ ನಿರುಕ್ತವು ಪೂರ್ಣವಾಗಿಲ್ಲ.ಕ್ರಮವಾಗಿ ಅರ್ಥವಿವರಣೆಯನ್ನೂ ಮಾಡಿಲ್ಲ. ಆದುದರಿಂದ ಅದನ್ನು ವೇದಭಾಷ್ಯವೆಂದು ಹೇಳಲು ಸಾಧ್ಯವಿಲ್ಲ. ಅಲ್ಲಿಂದ ಮುಂದೆ ಋಗ್, ಯಜುರ್, ಸಾಮ, ಅಥರ್ವಣ ವೇದಗಳಿಗೆ ಅನೇಕರು ಭಾಷ್ಯವನ್ನು ಬರೆದಿದ್ದಾರೆ. ಇವರಲ್ಲಿ ಯಾರೊಬ್ಬರೂ ಪೂರ್ಣವಾಗಿ ಎಲ್ಲ ವೇದಗಳಿಗೂ ಭಾಷ್ಯವನ್ನು ಬರೆದಿಲ್ಲ. ಬರೆದಿರುವುದು ಉಪಲಬ್ಧವೂ ಅಲ್ಲ. ಅವರಲ್ಲೆಲ್ಲ ಸಾಯಣ ಭಾಷ್ಯವೇ ವಿಶೇಷ ಪ್ರಾಶಸ್ತ್ಯದಿಂದ ಕೂಡಿದೆ. ಸಾಯಣರು ಮಾತ್ರ ನಾಲ್ಕು ವೇದಗಳಿಗೂ ಭಾಷ್ಯವನ್ನು ಎಲ್ಲರಿಗಿಂತಲೂ ವಿಸ್ತಾರವಾಗಿ ಬರೆದಿದ್ದಾರೆ. ಇವರಿಗಿಂತ ವಿಶದವಾಗಿ ಯಾರೂ ಬರೆದಿಲ್ಲ. ಆದುದರಿಂದ ವೇದಭಾಷ್ಯಗಳೆಲ್ಲೆಲ್ಲ ಸಾಯಣ ಭಾಷ್ಯಕ್ಕೆ ಅಗ್ರಸ್ಥಾನ.

ವೇದಭಾಷ್ಯಕಾರರಲ್ಲಿ ಸಾಯಣಾಚಾರ್ಯರಿಗೆ ವಿಶೇಷವಾದ ಪೂಜ್ಯಸ್ಥಾನವಿದೆ. ಅವರ ವೈದಿಕ ವಾಙ್ಮಯದ ಪರಿಚಯದಿಂದ ಅವರ ಅಪಾರ ಅಧ್ಯಯನ, ವೇದಗಳಲ್ಲಿ ಅವರಿಗಿದ್ದ ಅಸಾಧಾರಣ ಪರಿಚಯ ಮತ್ತು ನಾನಾಶಾಸ್ತ್ರಗಳಲ್ಲಿ ಅವರಿಗಿದ್ದ ಪಾಂಡಿತ್ಯ–ಮೊದಲಾದ ವಿಷಯಗಳು ವ್ಯಕ್ತವಾಗುವುವು. ಸಾಯಣರು ಈ ಕೆಳಗಿನ ವೇದ ಭಾಗಗಳಿಗೆ ಭಾಷ್ಯವನ್ನು ರಚಿಸಿದ್ದಾರೆ.

1) ಕೃಷ್ಣ ಯಜುರ್ವೇದದ ತೈತ್ತಿರೀಯ ಶಾಖೆಯ ಸಂಹಿತೆ
2) ಋಗ್ವೇದ ಸಂಹಿತಾ
3) ಸಾಮವೇದ ಸಂಹಿತಾ
4) ಶುಕ್ಲಯಜುರ್ವೇದ ಕಾಣ್ವಸಂಹಿತಾ
5) ಅಥರ್ವಣವೇದ ಸಂಹಿತಾ.

ಹಾಗೆಯೇ ಈ ಕೆಳಗಿನ ಬ್ರಾಹ್ಮಣ, ಆರಣ್ಯಕ ಮತ್ತು ಉಪನಿಷತ್ತುಗಳಿಗೂ ವ್ಯಾಖ್ಯಾನಗಳನ್ನು ಬರೆದಿದ್ದಾರೆ.

ಅ) ಕೃಷ್ಣಯಜುರ್ವೇದದ ತೈತ್ತಿರೀಯ ಬ್ರಾಹ್ಮಣ ಮತ್ತು ತೈತ್ತಿರೀಯ ಆರಣ್ಯಕ, ಉಪನಿಷತ್ತುಗಳು.

ಆ) ಋಗ್ವೇದದ ಐತರೇಯ ಬ್ರಾಹ್ಮಣ ಐತರೇಯಾರಣ್ಯಕ

ಇ) ಸಾಮವೇದದ ತಾಂಡ್ಯ, ಷಡ್‌ವಿಂಶ ಸಾಮವಿಧಾನ, ಆರ್ಷೇಯ, ದೇವತಾಧ್ಯಾಯ ಉಪನಿಷತ್, ಸಂಹಿತೋಪನಿಷತ್ ವಂಶ ಬ್ರಾಹ್ಮಣಗಳಿಗೂ,

ಈ) ಶುಕ್ಲಯಜುರ್ವೇದದ ಶತಪಥಬ್ರಾಹ್ಮಣಗಳಿಗೂ ಭಾಷ್ಯಗಳನ್ನು ರಚಿಸಿದ್ದಾರೆ.

ಸಾಯಣಾಚಾರ್ಯರು ಪ್ರತಿಯೊಂದು ವೇದಭಾಷ್ಯಕ್ಕೂ ಒಂದೊಂದು ಭೂಮಿಕೆಯನ್ನು ಬರೆದಿದ್ದಾರೆ. ಅವುಗಳೆಲ್ಲವೂ ಸಾಮಾನ್ಯವಾಗಿ ಒಂದೇ ರೀತಿಯಾಗಿರುತ್ತದೆ.

ತೈತ್ತಿರೀಯೋಪನಿಷತ್ ಭಾಷ್ಯದ ಉಪೋದ್ಘಾತದಲ್ಲಿ ವೇದಲಕ್ಷಣ, ಅಧಿಕಾರಿ, ವೇದಪ್ರಾಮಾಣ್ಯ, ವೇದಭಾಗಗಳು ಮತ್ತು ಯಜ್ಞ ಮತ್ತು ಯಜ್ಞ ವಿಭಾಗಗಳು ಚರ್ಚಿತವಾಗಿವೆ. ಇತರ ಉಪೋದ್ಘಾತಗಳಲ್ಲಿಯೂ ಇವುಗಳಂತೆಯೇ ಆಯಾಭಾಗಗಳಿಗೆ ಸಂಬಂಧಪಟ್ಟಂತೆ ವಿಶೇಷ ಚರ್ಚೆಯಿದೆ. ಈಗ ವೇದಾಭ್ಯಾಸಕ್ಕೆ ಸಾಯಣಭಾಷ್ಯಕ್ಕಿಂತ ಉತ್ತಮವಾದ ಬೇರೊಂದು ಕೃತಿಯಿಲ್ಲ.

ಸಾಯಣರು 14 ನೆಯ ಶತಮಾನದ ಆದಿಭಾಗದಲ್ಲಿ ವಿಜಯನಗರದ 2ನೆಯ ಬುಕ್ಕನ ಆಸ್ಥಾನದಲ್ಲಿದ್ದವರು. ಅವರು ವೇದಭಾಷ್ಯವೇ ಅಲ್ಲದೆ ಇತರ ಅನೇಕ ಸಾಹಿತ್ಯ ಮತ್ತು ಇತರ ಗ್ರಂಥಗಳನ್ನು ರಚಿಸಿದ್ದಾರೆ. ಸಾಯಣರಾದ ಮೇಲೆಯೂ 17ನೆಯ ಶತಮಾನದವರೆಗೆ ವೇದಭಾಷ್ಯಗಳು ರಚಿತವಾಗುತ್ತಿದ್ದರೂ ಅವು ಯಾವುಗಳಿಗೂ ಸಾಯಣಭಾಷ್ಯದ ಪ್ರಾಶಸ್ತ್ಯವಿಲ್ಲ.

## ವೇದಕಾಲದ ಸಾಮಾಜಿಕ ಜೀವನ

ವೇದಗಳು ಭಾರತದ ಪ್ರಪ್ರಾಚೀನವಾದ ಸಾಹಿತ್ಯರಾಶಿ. ಇವುಗಳ ಕಾಲ ಕ್ರಿ. ಪೂ. 2000 ವರ್ಷಗಳಿಗಿಂತ ಪ್ರಾಚೀನವಾದುದೆಂದು ನಿಸ್ಸಂದೇಹವಾಗಿ ಹೇಳಬಹುದು. ಇದರಲ್ಲಿ ಪ್ರಾಚೀನ ಆರ್ಯರ ಜೀವನ ಸ್ಥಿತಿಯು ಪ್ರಾಸಂಗಿಕವಾಗಿ ಉಕ್ತವಾಗಿದೆ. ಇದು ಮುಂದೆ ಕಾಲಾನುಕಾಲಕ್ಕೆ ಬದಲಾಯಿಸಿದೆ. ಅವುಗಳಲ್ಲಿ ಅನೇಕವು

ಮುಂದಿನ ಮನ್ವಾದಿ ಸ್ಮೃತಿಕಾರರಿಂದ ನಿಷಿದ್ಧವೆಂದು ಪರಿಗಣಿತವಾಗಿದೆ. ಆದರೂ ಅದು ಮುಂದಿನ ಜನಾಂಗದ ಮೇಲೆ ವಿವಿಧರೀತಿಯಲ್ಲಿ ಪರಿಣಾಮಕಾರಿಯಾಗಿರುವುದರಿಂದ ಅವುಗಳ ಪರಿಚಯ ಬಹುಮಟ್ಟಿಗೆ ಉಪಯೋಗವಾಗುತ್ತದೆ.

ಆಧುನಿಕ ಸಂಶೋಧಕರು ಭಾಷಾಶಾಸ್ತ್ರದ ಆಧಾರದ ಮೇಲೆ ಭಾರತೀಯರು, ಪಾರ್ಸಿಕರು, ಗ್ರೀಕರು, ಜರ್ಮನರು, ಇಟಾಲಿಯನ್ನರು ಮುಂತಾದವರೆಲ್ಲರೂ ಒಂದೇ ಬುಡಕಟ್ಟಿನವರಾಗಿದ್ದು ಒಂದೇ ಸ್ಥಳದಲ್ಲಿ ವಾಸವಾಗಿದ್ದವರು ಎಂದು ಸಾಧಿಸಿದ್ದಾರೆ. 'ಅವೆಸ್ತಾ'ವನ್ನೂ ಹೋಲಿಸಿ ನೋಡಿದರೆ ಆರ್ಯರಲ್ಲಿ ಪಶ್ಚಿಮಕ್ಕೆ ಒಂದು ಗುಂಪು ಮತ್ತು ಪೂರ್ವಕ್ಕೆ ಒಂದು ಗುಂಪು ಹೊರಟಮೇಲೆ ಬಹುಕಾಲ ಹಿಂದೂಗಳು ಪಾರ್ಸಿಕರು ಒಟ್ಟಿಗೆ ವಾಸಿಸುತ್ತಿದ್ದರೆಂದೂ ತಿಳಿದುಬರುತ್ತದೆ. ಅನಂತರ ಹಿಂದುಗಳು ಹಿಂದೂದೇಶವನ್ನು ಪ್ರವೇಶಿಸಿದರು. ಇವರು ವಾಸಿಸುತ್ತಿದ್ದ ಸ್ಥಳವನ್ನು ಋಗ್ವೇದದಲ್ಲಿ ಬರುವ ನದಿಗಳ ಹೆಸರಿನಿಂದ ತಕ್ಕಮಟ್ಟಿಗೆ ನಿರ್ದೇಶಿಸಬಹುದು. ಗಂಗಾನದಿಯ ಹೊರತಾಗಿ ಇತರ ಉತ್ತರದೇಶದ ನದಿಗಳ ಹೆಸರುಗಳು ಪದೇ ಪದೇ ಬರುತ್ತವೆ. ಸಿಂಧು ಮತ್ತು ಅದರ ಉಪನದಿಗಳಾದ (ಝೀಲಂ) ಅಸಿಕ್ನಿ (ಚೀನಾಬ್) ಪರುಷ್ಣಿ ಇರಾವತಿ (ರಾವಿ) ವಿಪಸ್ (ಬಿಯಾಸ್) ಶತುದ್ರಿ (ಸಟ್ಲೇಜ್) ಎಂಬ ನದಿಗಳ ಹೆಸರುಗಳು. ಯಮುನ ಸರಸ್ವತಿ ನದಿಗಳ ಹೆಸರುಗಳೂ ಋಗ್ವೇದದಲ್ಲಿವೆ. ಗಂಗಾನದಿಯ ಹೆಸರು ಒಂದೇ ಬಹಳ ಸ್ಥಳದಲ್ಲಿ (10-75-5) ಬರುತ್ತದೆ. ಅಂದರೆ ಋಗ್ವೇದದ ಬಹುಭಾಗವು ರಚಿಸಲ್ಪಡುವವರಗೆ ಆರ್ಯರು ಗಂಗಾನದಿಯ ಬಯಲಿಗೆ ಬಂದಿರಲಿಲ್ಲ. ಕುಭಾ ಮತ್ತು ಸುವಾಸ್ತು – ಈ ಹೆಸರುಗಳು ಬಂದಿರುವುದರಿಂದ ಋಗ್ವೇದದ ಭಾಗ ರಚಿತವಾಗುವವರಗೆ ಆರ್ಯರು ಪಂಜಾಬ ಮತ್ತು ಕಾಬೂಲ್ ಪ್ರಾಂತಗಳಲ್ಲಿಯೇ ವಾಸಿಸುತ್ತಿದ್ದರೆಂದು ಹೇಳಬೇಕಾಗುತ್ತದೆ.

ಹಳ್ಳಿಗಳು ಪಟ್ಟಣಗಳು ಕಬ್ಬಿಣದಿಂದ ಮಾಡಿದ ಕೋಟೆಗಳು ಎಂದು ಅಲ್ಲಲ್ಲಿ ಉಕ್ತವಾಗಿವೆ. (1-114-1, 1-114-10, 7-3-7, 7-15-14, 1-95-1) ಇದರಿಂದ ಆ ಕಾಲದಲ್ಲಿ ಕೋಟೆಕೊತ್ತಲಗಳು ರೂಢಿಯಲ್ಲಿದ್ದವೆಂದು ಹೇಳಬಹುದು.

ಜನರ ಮುಖ್ಯವಾದ ಉದ್ಯೋಗಗಳು ಕೃಷಿ ಮತ್ತು ಪಶುಪಾಲನೆ. ಪ್ರತಿಯೊಂದು ದೇವತಾ ಪ್ರಾರ್ಥನೆಯಲ್ಲಿಯೂ ಗೋವುಗಳು, ಕುರಿಗಳು, ಆಡುಗಳು, ಕುದುರೆಗಳು—ಇವುಗಳನ್ನು ಬೇಡುವುದು ಸಾಧಾರಣವಾಗಿದೆ. ಅದರಲ್ಲಿಯೂ ಹಾಲು ಕರೆಯುವ ಗೋವುಗಳಿಗೆ ಪ್ರಾರ್ಥನೆ ಹೆಚ್ಚು. ಜನರು ಉಪಯೋಗಿಸುತ್ತಿದ್ದ ಧಾನ್ಯವೆಂದರೆ ಯವ. ಅಕ್ಕಿಯ ಹೆಸರೇ ವೇದದಲ್ಲಿ ಇಲ್ಲವೆನ್ನಬಹುದು. ಅಥರ್ವ ವೇದದಲ್ಲಿ ಮಾತ್ರ ಅಕ್ಕಿಯ ಹೆಸರು ಬರುತ್ತದೆ.

ಹುರಿದ ಧಾನ್ಯಗಳು ಮೊಸರು ಅಥವಾ ತುಪ್ಪದೊಡನೆ ಬೆರಸಿದ ಹಿಟ್ಟು (ಕರಂಭ) ಇವುಗಳು ದೇವತೆಗಳಿಗೆ ಅರ್ಪಿಸಲ್ಪಡುತ್ತದೆ.(3-35-3, 7-3-52-5-7) ಅನೇಕ ವೃಕ್ಷಗಳ ಹೆಸರು ಬರುತ್ತದೆ. ಅವುಗಳನ್ನುದ್ದೇಶಿಸಿ ಸ್ತೋತ್ರಗಳಿವೆ. (7-24-23-7-35-5, 10-92-15) ಪ್ರಾಯಶಃ ಹೋಮಾದಿಗಳಿಗೋಸ್ಕರ ಮಾಂಸ ಖಂಡವನ್ನೂ ಹೇಳಿದೆ. (1-161-10, 5-29-7-,8-12-8) ಇವುಗಳಲ್ಲಿ ಅನೇಕ ಮಹಿಷಗಳನ್ನು ಬೇಯಿಸಿದರು ಅಥವಾ ತಿಂದರು ಎಂದಿದೆ. ಇವುಗಳಿಂದ ಮಾಂಸಾಹಾರವೂ ರೂಢಿಯಲ್ಲಿತ್ತೆಂದು ತಿಳಿಯಬಹುದು. ಸೋಮಪಾನವು ಸಾಧಾರಣವಾದ ಪಾನೀಯವಾಗಿತ್ತು. ಅದನ್ನು ಇಂದ್ರಾದಿ ದೇವತೆಗಳಿಗೆ ಅರ್ಪಿಸುತ್ತಿದ್ದುದಲ್ಲದೆ ಆ ದೇವತೆಗಳ ಆರಾಧಕರೂ ಅದನ್ನು ಪಾನಮಾಡುತ್ತಿದ್ದರು. ಸೋಮಪಾನದಿಂದ ಮತ್ತರಾಗಿದ್ದರು ಎಂದೂ ಅಲ್ಲಲ್ಲಿ ಹೇಳಿದೆ. (6-47-7, 8-48-6) ಸುರಾಪಾನವೂ ಬಳಕೆಯಲ್ಲಿತ್ತು. ಆದರೆ ಈಚೆಗೆ ಇವೆಲ್ಲ ನಿಷಿದ್ಧವೆಂದು ಮನ್ವಾದಿ ಧರ್ಮ ಶಾಸ್ತ್ರಗಳಲ್ಲಿ ನಿಷೇಧಿಸಲ್ಪಟ್ಟಿದೆ.

ಅನೇಕ ಕಸುಬುಗಳು ವೇದದ ಕಾಲದ ಆರ್ಯರಿಗೆ ಗೊತ್ತಿದ್ದವು. ರಥಗಳನ್ನು ತಯಾರಿಸುವುದರಲ್ಲಿ ಅವರು ಬಹು ಕುಶಲರಾಗಿದ್ದರು. (9-112) ಕವಿಗಳ ರಚನಾ ಕೌಶಲವನ್ನು ರಥ ಕಾರರ ಕುಶಲತೆಗೆ ಹೋಲಿಸಿದ್ದಾರೆ. (2-19-8, 2-35-2) ಬಟ್ಟೆ ನೇಯುವುದು ಸರ್ವಸಾಧಾರಣವಾದ ವೃತ್ತಿ. ಹಡಗುಗಳನ್ನು ಕಟ್ಟುವುದು (239-4, 1-25-7) ಹಗ್ಗಗಳನ್ನು ಹೊಸೆಯುವುದು (7-84-2) ಚರ್ಮವನ್ನು ಹದ ಮಾಡುವುದು, ಚರ್ಮದ ಪದಾರ್ಥಗಳನ್ನು ಮಾಡುವುದು (7-63-1, 7-89-2)–ಇವು ಆರ್ಯರು ಅವಲಂಬಿಸಿದ್ದ ಇತರ ಕಸುಬುಗಳು. ವ್ಯವಸಾಯವು ಬಹಳ ಮುಂದುವರೆದಿತ್ತು. ನೀರಾವರಿ ಕೆಲಸಗಳು ಬಹಳ ಹೆಚ್ಚಾಗಿದ್ದವು. (1-49-2, 3-45-2) ಕಳ್ಳರೂ ದರೋಡೆಕಾರರೂ ಇದ್ದರು (1-55-3, 3-86-5).

ಮನೆಗೆ ತಂದೆಯೇ ಯಜಮಾನ. ವಿವಾಹವು ಬಹಳ ಪವಿತ್ರವಾದುದೆಂದು ಭಾವಿಸಲ್ಪಟ್ಟಿತ್ತು. ಪತಿ ಪತ್ನಿಯರ ಸಂಬಂಧದಷ್ಟು ಸೂಕ್ಷ್ಮವಾದ ಒಲುಮೆಯ ಕಟ್ಟು ಬೇರೊಂದಿರಲಿಲ್ಲ. ಹೆಂಡತಿಯ ಸ್ಥಾನ ಮನೆಯಲ್ಲಿ ಬಹಳ ಹೆಚ್ಚಿನದು. ಆಕೆಯಿಲ್ಲದ ಮನೆ ಮನೆಯೇ ಅಲ್ಲವೆಂಬ ಭಾವನೆ

ಯಿತ್ತು. 'ಗೃಹಾನ್ ಗಚ್ಛ ಗೃಹಪತ್ನೀ'. ಹೋಮ ಹವನಗಳಲ್ಲಿ ಆಕೆಗೆ ಪತಿಯೊಡನೆ ಸಮಾನವಾದ ಅಧಿಕಾರವುಂಟು. ಪತಿಯು ಕಾರಣಾಂತರದಿಂದ ಊರಿನಲ್ಲಿಲ್ಲದಿದ್ದರೆ ಅವಳಿಗೆ ಹೋಮ ಮಾಡುವ ಅಧಿಕಾರಗಳೂ ಉಂಟು. ಗಂಡನ ಮನೆಯಲ್ಲಿ ಆಕೆಯು ಯಜಮಾನಿ. ಹೊಸದಾಗಿ ಗಂಡನ ಮನೆಗೆ ಹೋಗುವಾಗ ಈ ಮಂತ್ರದಿಂದ ಆಶೀರ್ವಾದ ಮಾಡುತ್ತಾರೆ.

ಸಮ್ರಾಜ್ಞೀ ಶ್ವಶುರೇ ಭವ
ಸಮ್ರಾಜ್ಞೀ ಶ್ವಶ್ರ್ವಾಂ ಭವ
ನನಾಂದರಿ ಸಮ್ರಾಜ್ಞೀ ಅಧಿದೇವೃಷು
(10–85–86)

ಅಂದರೆ ಗಂಡನ ಮನೆಯಲ್ಲಿ ಅತ್ತೆ, ಮಾವ, ಮೈದುನರು ಎಲ್ಲರ ಮೇಲೆಯೂ ಅಧಿಕಾರ ಮಾಡಿಕೊಂಡು ಅವರ ಯೋಗಕ್ಷೇಮವನ್ನು ನೋಡಿಕೊಂಡಿರು ಎಂದು ಅಭಿಪ್ರಾಯ.

ಮತ್ತೊಂದು ಮಂತ್ರದಲ್ಲಿ (10–85) ಮಾವ ಮೈದುನ ಮೊದಲಾದವರಿಗೆ ಹರ್ಷದಾಯಕಳಾಗಿರು ಎಂದಿದೆ. ಸ್ತ್ರೀಗೆ ಮನೆಯಲ್ಲಿಯೂ ಸಮಾಜದಲ್ಲಿಯೂ ಗೌರವವಿತ್ತು.

ಮೇಲೆ ಹೇಳಿದ ಅಂಶಗಳಿಂದ ಏಕಪತ್ನೀತ್ವವೇ ರೂಢಿಯಲ್ಲಿತ್ತೆಂದು ಭಾವಿಸಬೇಕಾಗುತ್ತದೆ. (1–124–7, 4–3–2, 10–71–4, 1–105–2) ಆದರೆ ಕ್ಷತ್ರಿಯರಲ್ಲಿ ಹೆಚ್ಚಾಗಿ ಬಹು ಪತ್ನೀತ್ವವೂ ಇದ್ದಂತೆ ಕಾಣುತ್ತದೆ. (1–6–2, 11, 1–71–1)

ಸ್ತ್ರೀಗೆ ತನ್ನ ಪತಿಯನ್ನು ವರಿಸುವ ಸ್ವಾತಂತ್ರ್ಯವಿತ್ತು. (12–27–11–12) ವಿವಾಹವೆನ್ನುವುದು ದೈವಿಕವಾದ ಘಟನೆ. ಇದರ ಮುಖ್ಯೋದ್ದೇಶ ಸ್ತ್ರೀ ಪುರುಷರು ಪರಸ್ಪರ ಹೊಂದಿಕೊಂಡು ಶ್ರೇಯಸ್ಸಾಧನೆ ಮಾಡುವುದು ಮತ್ತು ವಂಶವನ್ನು ಬೆಳೆಸುವುದು. ಆದ್ದರಿಂದಲೇ ಸಾಧಾರಣವಾಗಿ ಎಲ್ಲ ಪ್ರಾಣಿಗಳಲ್ಲೂ ಒಳ್ಳೆಯ ಸಂತಾನಾಪೇಕ್ಷೆಯು ಸೇರಿಕೊಂಡೇ ಇದೆ. ದತ್ತಪುತ್ರನಿಗಿಂತ ಔರಸಪುತ್ರನಿಗೆ ಹೆಚ್ಚಿನ ಸ್ಥಾನವಿತ್ತು. ಆದ್ದರಿಂದಲೇ ಪ್ರತಿಯೊಬ್ಬನೂ ಪುತ್ರಾರ್ಥಿಯಾಗಿದ್ದನು. ವೇದದ ಕಾಲದಿಂದೀಚೆಗೂ ಪುತ್ರೋತ್ಪತ್ತಿಗಿಂತ ಹೆಚ್ಚಿನ ಸಂತೋಷವಿಲ್ಲವೆಂಬ ಭಾವನೆ ಕಂಡು ಬರುತ್ತದೆ.

ಆಗಿನ ಸಮಾಜದಲ್ಲಿ ಸಹಗಮನವು ರೂಢಿಯಲ್ಲಿದ್ದ ಹಾಗೆ ಕಾಣುವುದಿಲ್ಲ. ಅಥರ್ವವೇದದಲ್ಲಿ ಮಾತ್ರ ಸಹಗಮನವು ಪುರಾಣಪದ್ಧತಿಯೆಂದು ಉಕ್ತವಾಗಿದೆ. ಋಗ್ವೇದದಲ್ಲಿ ವಿಧವೆಗೆ ಆಸ್ತಿಯ ಹಕ್ಕುಂಟೆಂದು ಹೇಳಿರುವುದರಿಂದ ಸಹಗಮನವು ನಿರ್ಬಂಧವಾಗಿರಲಿಲ್ಲವೆಂದೂ (ಐಚ್ಛಿಕವಾಗಿತ್ತೆಂದು) ಹೇಳಬಹುದು. (10–18–7, 10–40–2)

ಪುನರ್ವಿವಾಹವು ರೂಢಿಯಲ್ಲಿರಲಿಲ್ಲವೆಂದು ಊಹಿಸಬಹುದು. ವಿವಾಹವು ಬಹಳ ಪವಿತ್ರವಾದುದರಿಂದ ಪುನರ್ವಿವಾಹಕ್ಕೆ ಅವಕಾಶವಿರಲಿಲ್ಲ. ಆದರೆ ಒಂದು ಮಂತ್ರದಲ್ಲಿ ಮಾತ್ರ ವಿಧವೆಯು ತನ್ನ ಮೈದುನನನ್ನು ವಿವಾಹಮಾಡಿಕೊಳ್ಳಲು ಅನುಮತಿ ಇದೆಯೆಂದು ಖಚಿತವಾಗಿ ತಿಳಿದು ಬರುತ್ತದೆ. (10–40–2) ಮನುವೂ ಕೂಡ (9–69–70) ಕೆಲವು ಸಂದರ್ಭಗಳಲ್ಲಿ ವಿಧವೆಯು ತನ್ನ ಮೈದುನನನ್ನು ವಿವಾಹವಾಗಬಹುದು ಎಂದು ಹೇಳಿದ್ದಾನೆ. ಆದರೆ (9–69–68) ಅದೇ ಅಧ್ಯಾಯದಲ್ಲಿ ಈ ವಿವಾಹವು ಒಂದು ಗಂಡು ಮಗುವಾಗುವವರೆಗೆ ಮಾತ್ರವೆಂದು ಹೇಳಲ್ಪಟ್ಟಿದೆ.

ಪತಿ ಪತ್ನಿಯರು ಸ್ವಧರ್ಮವನ್ನು ಬಿಡುವುದು, ವ್ಯಭಿಚಾರ, ಇವುಗಳೂ ಇದ್ದವೆಂದು ಕಂಡು ಬರುತ್ತದೆ. (10–34–4, 10–40–6, 2–29–1) ಸ್ತ್ರೀಯರು ಅವಿಧೇಯರು ಚಲಚಿತ್ತರೆಂದು ಒಂದು ಮಂತ್ರದಲ್ಲಿ ಹೇಳಿದೆ. (8–33–17)

ಅನೃತವನ್ನಾಡುವುದು ಮಹಾಪಾತಕವಾಗಿತ್ತು. ದೇವತೆಗಳು ಅಂತಹವರನ್ನು ಶಿಕ್ಷಿಸುವರೆಂಬ ನಂಬಿಕೆಯಿತ್ತು. (1–152–1, 7–49–3)

ಜನರು ಗುಂಪುಗುಂಪಾಗಿ (ಪಂಗಡ, ಬುಡಕಟ್ಟು)ವಾಸಿಸುತ್ತಿದ್ದರು. ಒಂದೊಂದು ಗುಂಪೂ ಬೇರೆ ಬೇರೆ ಸ್ವತಂತ್ರವಾದ ಪಂಗಡ, ಹೊರಗಿನವರು ದಂಡೆತ್ತಿಬಂದಾಗ ಯುದ್ಧಗಳಾದಾಗ ಮಾತ್ರ ಈ ಪಂಗಡಗಳು ಒಟ್ಟಾಗಿ ಸೇರುತ್ತಿದ್ದವು. ಪ್ರತಿ ಪಂಗಡಕ್ಕೂ ಒಬ್ಬ ರಾಜನಿರುತ್ತಿದ್ದನು. ಇಂತಹ ಅನೇಕ ರಾಜರಿದ್ದರೆಂಬುದು ಸ್ಪಷ್ಟವಾಗಿದೆ. (7–33–3, 7–83–6). ಈ ರಾಜರು ಬಹು ಪತ್ನೀಕರು. (3–18–28) ಪ್ರತಿಯೊಬ್ಬ ರಾಜನಿಗೂ ಪುರೋಹಿತರಿರುತ್ತಿದ್ದರು. ಮನೆಯ ಎಲ್ಲಾ ಶುಭಾಶುಭಗಳನ್ನು ನಡೆಸುವುದು ಇವರ ನೇತೃತ್ವದಲ್ಲಿಯೇ. ಅವರಿಗೆ ರಾಜರು ಯಥೇಚ್ಛವಾಗಿ ದಾನಮಾಡುತ್ತಿದ್ದರು. ಇಂತಹ ದಾನ ಸ್ತುತಿಗಳು ಅನೇಕ ಕಡೆ ಇವೆ. ಪುರೋಹಿತನು ರಾಜನಿಗೆ ಯಶಸ್ಸನ್ನು ಬಯಸಿ ರಾಜಾಶೀರ್ವಾದ ಮಾಡುತ್ತಾನೆ. (10–173)

ಈ ಕಾಲದಲ್ಲಿ ದೇವತೆಗಳ ಮೂರ್ತಿಪೂಜೆಯಿತ್ತೆಂದು ಖಚಿತವಾಗಿ ಹೇಳಲಾಗುವುದಿಲ್ಲ. ಇರಲಿಲ್ಲವೆಂಬುದು ಐರೋಪ್ಯಪಂಡಿತರ ಖಚಿತ ಅಭಿಪ್ರಾಯ. ಅದಕ್ಕೆ ವಿರೋಧವಾಗಿ ಡಾ॥ ಟಿಲ್ಲೆರ್ಸ ಎಂಬುವರು 2–70–9, 1–25–17, 5–12–15ನೆಯ ಮಂತ್ರಗಳ ಆಧಾರದ ಮೇಲೆ ದೇವತೆಗಳಿಗೆ ಆಕಾರವಿತ್ತೆಂದೂ 5–12–15 ರಲ್ಲಿ ಮರುತ್ತು ಮತ್ತು ಅವರ ವಿಗ್ರಹಗಳಿಗೂ ಪೂಜೆ ಸೂಚಿಸಿದೆಯೆಂದು ಅಭಿಪ್ರಾಯಪಡುತ್ತಾರೆ. ಇದು ಹೀಗೆಯೇ ಎಂದೂ ಸ್ಪಷ್ಟವಾಗಿ ಹೇಳಲಾಗುವುದಿಲ್ಲ.

ವರ್ಣವ್ಯವಸ್ಥೆಯ ವಿಷಯವನ್ನು ಹೀಗೆಂದು ಸ್ಪಷ್ಟವಾಗಿ ಹೇಳಲಾಗುವುದಿಲ್ಲ. ಈಗಿನ ಜಾತಿ ಪದ್ಧತಿಗಳಿಗೂ ಅಲ್ಲಿರುವ ವರ್ಣವ್ಯವಸ್ಥೆಗೂ ವಿಶೇಷ ವ್ಯತ್ಯಾಸವಿದೆ. ಈಗ ಜಾತಿಯು ಒಡೆದು ಅನೇಕ ಪಂಗಡಗಳಾಗಿ ದೇಶದ ಅವನತಿಗೆ ಕಾರಣವಾಗಿದೆ. ಋಗ್ವೇದದ 10ನೆಯ ಮಂಡಲದವರೆಗೆ ಜಾತಿ ಮತ ವ್ಯತ್ಯಾಸಗಳಿದ್ದುವೆಂಬುದಕ್ಕೆ ಆಧಾರಗಳು ಸಿಕ್ಕುವುದಿಲ್ಲ.

ಹತ್ತನೆಯ ಮಂಡಲದ ಪುರುಷಸೂಕ್ತದಲ್ಲಿ (10–90) ಮೊದಲು ಚಾತುರ್ವರ್ಣವು ಉಕ್ತವಾಗಿದೆ.

ಬ್ರಾಹ್ಮಣೋಽಸ್ಯ ಮುಖಮಾಸೀತ್ ಬಾಹೂ ರಾಜನ್ಯಃಕೃತಃ. ಊರೂತದಸ್ಯ ಯದ್ವೈಶ್ಯಃ ಪದ್ಭ್ಯಾಂ ಶೂದ್ರೋ ಅಜಾಯತ.

ವಿರಾಟ್‌ಪುರುಷನ ಮುಖದಿಂದ ಬ್ರಾಹ್ಮಣನೂ ಬಾಹುಗಳಿಗೆ ರಾಜನೂ ಊರುವಿನಿಂದ ವೈಶ್ಯನೂ ಪಾದಗಳಿಂದ ಶೂದ್ರನೂ ಜನಿಸಿದರು ಎಂದು ಹೇಳಿದೆ.

ಈ ಸೂತ್ರವು ಋಗ್ವೇದಕ್ಕೆ ಮೊದಲು ಸೇರಿದ್ದಲ್ಲ. ಈಚೆಗೆ ಸೇರಿಸಲ್ಪಟ್ಟದ್ದೆಂದು ಕೆಲವರ ಅಭಿಪ್ರಾಯ. ಮತ್ತೆ ಕೆಲವರು ಇದನ್ನು ಈಚಿನದೆಂದು ಭಾವಿಸಬೇಕಾಗಿಲ್ಲ, ಒಂದೊಂದು ಅಂಗವೂ ಒಬ್ಬೊಬ್ಬರ ಜನ್ಮಸ್ಥಾನ ಎಂದು ಹೇಳುವರು. ಆಯಾ ಗುಂಪಿನವರು ಹೆಚ್ಚಾಗಿ ಆಯಾ ಅಂಗಗಳನ್ನು ಉಪಯೋಗಿಸಿ ಕೆಲಸ ಮಾಡಬೇಕೆಂದು ಸೂಚಿಸುವುದಕ್ಕಾಗಿ ಬ್ರಾಹ್ಮಣನು ಬಾಯಿಂದ ಜನಿಸಿದನೆಂದರೆ ವಿದ್ಯೆಯಿಂದ ಜೀವಿಸಬೇಕಾಗುತ್ತದೆ. ಅಥವಾ ಒಂದೊಂದು ರಂಗದಲ್ಲಿಯೂ ವಿದ್ಯೋಪದೇಶಕರು ಮಂತ್ರಾದಿಗಳನ್ನು ಪಂಗಡದ ಶ್ರೇಯಸ್ಸಿಗಾಗಿ ಉಚ್ಚರಿಸುವವರು ಬ್ರಾಹ್ಮಣನೆನಿಸಿಕೊಳ್ಳುತ್ತಾರೆ. ಬಾಹುಬಲದಿಂದ ರಕ್ಷಣಾಕಾರ್ಯದಲ್ಲಿ ತೊಡಗಿದವರು ಕ್ಷತ್ರಿಯರಾದರು. ವ್ಯಾಪಾರ ಕೃಷಿ ಮುಂತಾದ ದೇಹಶ್ರಮದಿಂದಾಗುವ ಕಾರ್ಯವನ್ನು ಮಾಡುವವರು ವೈಶ್ಯರು. ದೇಹಕ್ಕೆ ಪಾದವು ಹೇಗೆ ಆಧಾರಭೂತವೋ ಅದರಂತೆ ಸಮಾಜಕ್ಕೆ ಆಧಾರಭೂತರಾಗಿ ಇತರ ಎಲ್ಲ ಕೆಲಸಗಳನ್ನು ಮಾಡುವವರು ಶೂದ್ರರೆಂದು ಎನಿಸಿ

ಮಂಗಾಪುರದ ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯದಲ್ಲಿ ಪ್ರತಿ ಶ್ರವಣ ನಕ್ಷತ್ರದ ದಿನ ದಂದು ನಡೆಸಲು ತೀರ್ಮಾನಿಸಿದ ಉತ್ಸವ ಮೂರ್ತಿಗಳ ಮೆರವಣಿಗೆಗಾಗಿ ದಿತ್ತವನ್ನು ನಿಶ್ಚಯಿಸಲಾಯಿತು.

* * * * *

ಏರ್ಪೇಡಿನ ವ್ಯಾಸಾಶ್ರಮದ ಶ್ರೀ ವೆಂಕಟೇಶ್ವರ ಅನಾಥ ಶರಣಾಲಯ ಹಾಗೂ ಶಾಲೆಗೆ ಈ ವರೆಗೆ ನೀಡುತ್ತಿದ್ದ, (ವಿದ್ಯಾರ್ಥಿಗೆ ರೂ. 500/- ರಂತೆ ನೀಡುವ) 12 ವಾರ್ಷಿಕ ವಿದ್ಯಾರ್ಥಿವೇತನಗಳನ್ನು 25 ಕ್ಕೇರಿಸಲಾಯಿತು.

* * * * *

ಈ ಮೊದಲು ಎಸ್. ವಿ. ಕಲಾಪೀಠದಲ್ಲಿ ವಯೋಲಿನ್ ಅಧ್ಯಾಪಕರಾಗಿದ್ದ ಶ್ರೀ ದ್ವಾರಂ ಸತ್ಯನಾರಾಯಣ ಅವರಿಗೆ ಎರಡು ವರ್ಷದ ಅವಧಿಗಾಗಿ ಕಾಂಟ್ರಾಕ್ಟ್ ಪದ್ಧತಿಯಲ್ಲಿ ತಿ. ತಿ. ದೇಗಳಲ್ಲಿ ಉದ್ಯೋಗ ನೀಡಲು ಸರಕಾರಕ್ಕೆ ಶಿಫಾರಸು ಮಾಡಲಾಯಿತು.

* * * * *

ನರಸಿಂಗಾಪುರದ ಎಸ್. ವಿ. ವೇದಪಾಠಶಾಲೆಯಲ್ಲಿ ಒಬ್ಬ ಸಂಸ್ಕೃತ ಪಂಡಿತ ಹುದ್ದೆಯನ್ನು ಉಂಟಾಗಿಸಲು ಸರಕಾರಕ್ಕೆ ಶಿಫಾರಸು ಮಾಡಲು ತೀರ್ಮಾನಿಸಲಾಯಿತು.

* * * * *

ಕಾಕಿನಾಡದ ಸ್ಮಾರ್ತ ಪಾಠಶಾಲೆಗೆ 84-85 85–86 ಸಾಲಿಗಾಗಿ ವರ್ಷಕ್ಕೆ ರೂ – 4800 ಗಳಂತೆ ನೆರವು ನೀಡಲು ತೀರ್ಮಾನಿಸಲಾಗಿದೆ.

* * * * *

ಮುತ್ಯಾಲರೆಡ್ಡಿ ಪಲ್ಲಿಯ 'ವೈಕುಂಠ'-ತಿ.ತಿ.ದೇ. ಉದ್ಯೋಗಿಗಳ ಕಾಲೋನಿಯಲ್ಲಿ ಡ್ರೈನೇಜ ಸ್ಕೀಮನ್ನು ತಿ.ತಿ.ದೇ. ವೆಚ್ಚದಲ್ಲಿ ನಿರ್ವಹಿಸಲು ತೀರ್ಮಾನಿಸಲಾಯಿತು.

ಹೊಸದೆಹಲಿಯ ಆಂಧ್ರ ಪ್ರದೇಶ ಅತಿಥಿಗೃಹದ ಸಿಬ್ಬಂದಿಯವರಿಂದ ಅಲ್ಲಿ ತಿ. ತಿ. ದೇ. ಪ್ರಕಟಣೆಗಳು, ಕ್ಯಾಸೆಟ್‌ಗಳು, ಪ್ರತ್ಯೇಕ ದರ್ಶನ ಟಿಕ್ಕೆಟ್ಟುಗಳು, ಚಿನ್ನ, ಬೆಳ್ಳಿ, ಪದಕಗಳನ್ನು ಮಾರಾಟ ಮಾಡುವಿಕೆ ಹಾಗೂ ತಿರುಪತಿ ತಿರುಮಲೆಗಳಿಗೆ ಬರುವ ಯಾತ್ರಿಕರಿಗೆ ಕಾಟೇಜು ರಿಸರ್ವೇಷನ್ ಏರ್ಪಾಡು ಮಾಡುವಿಕೆಗಳಿಗಾಗಿ ರೂ. 12000 ವಾರ್ಷಿಕ ವೆಚ್ಚವನ್ನು ನೀಡಲು ತೀರ್ಮಾನಿಸಲಾಯಿತು.

* * * *

ತಿರುಪತಿಯ ಶ್ರೀಗೋವಿಂದರಾಜ ಸ್ವಾಮಿ ದೇವಾಲಯದ ಧ್ವಜಸ್ತಂಭಪೀಠ ಹಾಗೂ ಬಲಿಪೀಠಗಳ ತಾಮ್ರದ ಹೊದಿಕೆಗಳಿಗೆ ಚಿನ್ನದ ಲೇಪನವನ್ನು ಮಾಡಲು ತೀರ್ಮಾನಿಸಲಾಯಿತು.

* * * *

ನಾಗಲಾಪುರದ ಶ್ರೀವೇದನಾರಾಯಣ ಸ್ವಾಮಿ ದೇವಾಲಯಕ್ಕೆ ಬರುವ ಯಾತ್ರಾರ್ಥಿಗಳ ಸೌಲಭ್ಯಗಳಿಗಾಗಿ ಕೆಳಕಂಡಂತೆ ತೀರ್ಮಾನಿಸಲಾಯಿತು.

1. ತಿರುಮಲೆ, ಮಂಗಾಪುರ, ನಾರಾಯಣವನಗಳ ಮಾರ್ಗದಲ್ಲಿ ನಾಗಲಾಪುರ ಸೇರುವಂತೆ ರಿಯಾಯಿತಿ ದರಗಳಲ್ಲಿ ಬಸ್‌ಗಳನ್ನು ತಿ.ತಿ.ದೇ. ನಡೆಸಲು ಪ್ರಯತ್ನಿಸಬೇಕು.

2. ದೇವಾಲಯವನ್ನು ಜೀರ್ಣೋದ್ಧಾರಗೊಳಿಸಿ ಅಲಂಕರಣಗೊಳಿಸಬೇಕು.

3. ಉದ್ಯಾನವನವನ್ನು ಅಭಿವೃದ್ಧಿಗೊಳಿಸಬೇಕು. ಪುಷ್ಕರಿಣಿಯ ಏರ್ಪಾಡು ಮಾಡಲು ಇರುವ ಅನುಕೂಲಗಳನ್ನು ಪರಿಶೀಲಿಸಬೇಕು.

4. ಕ್ಯಾಂಟೀನ ಕಾಂಪ್ಲೆಕ್ಸ್ ನಿರ್ಮಿಸಿ ಯಾತ್ರಿಕರಿಗೆ ಊಟದ ವ್ಯವಸ್ಥೆ ಮಾಡಬೇಕು.

ತಿರುಮಲೆಯ ಶ್ರೀ ವೆಂಕಟೇಶ್ವರ ಕ್ಯಾಂಟೀನಿನ ಭೋಜನದ ದರಗಳನ್ನು ಪುನರ್ವಿಮರ್ಶಿತಗೊಳಿಸಲು ತೀರ್ಮಾನಿಸಲಾಗಿದೆ. ಇದರಂತೆ ಇದುವರೆಗೆ ರೂ4/-ಆಗಿದ್ದ ಪೂರ್ಣಭೋಜನದ ಬೆಲೆಯನ್ನು ರೂ 5/- ಕ್ಕೆ, ವಿಶೇಷ ಭೋಜನದ ಬೆಲೆಯನ್ನು ರೂ 6/-ರಿಂದ ರೂ 7/-ಕ್ಕೂ,ತಿ.ತಿ.ದೇ.ಉದ್ಯೋಗಿಗಳ ರಿಯಾಯಿತಿ ಭೋಜನವನ್ನು ರೂ 1-25/-ರಿಂದ ರೂ2/- ಕ್ಕೇರಿಸಲು ತೀರ್ಮಾನಿಸಲಾಗಿದೆ.

* * * *

ತಿರುಪತಿಯ ಎಸ್. ವಿ. ಬಾಲಮಂದಿರದ ಉನ್ನತ ಪ್ರಾಥಮಿಕಶಾಲೆಯನ್ನು ವಿದ್ಯಾರ್ಥಿಗಳ ಪೋಷಕರ ಸಂಘದ ಅಭ್ಯರ್ಥನೆಯಂತೆ ಪ್ರೌಢಶಾಲೆಯನ್ನಾಗಿ ಪರಿವರ್ತಿಸಿ ತಕ್ಕ ಉಪಾಧ್ಯಾಯರ ಹುದ್ದೆಗಳನ್ನು ಕಲ್ಪಿಸಲು ತೀರ್ಮಾನಿಸಲಾಯಿತು.

* * * *

ತಿರುಮಲೆಯ ವೈಕುಂಠಂ ಕ್ಯೂ ಕಾಂಪ್ಲೆಕ್ಸ್‌ನಲ್ಲಿ ಯಾತ್ರಿಕರಿಗೆ ಸರಸವಾದ ಬೆಲೆಗಳಲ್ಲಿ ಉಪಹಾರ ವಸ್ತುಗಳನ್ನು ನೀಡಲು ತಿರುಮಲೆಯ ಎಸ್. ವಿ. ಕ್ಯಾಂಟೀನ್‌ನಿಂದ ಆಹಾರ ಪದಾರ್ಥಗಳನ್ನು ಪಡೆದು ಕಮೀಷನ್ ಆಧಾರದಲ್ಲಿ ಸರತಿಯ ಸಾಲಿನಲ್ಲಿ ಮಾರಬೇಕೆಂದು ತೀರ್ಮಾನಿಸಲಾಗಿದ್ದು, ಈ ಕಮೀಷನ್ ಅನ್ನು ಒಂದು ರೂಪಾಯಿಗೂ ಕಡಿಮೆ ಬೆಲೆಯ ಆಹಾರ ವಸ್ತುವಿಗೆ 10% ಎಂದೂ ಮಿಕ್ಕೆಲ್ಲವುಗಳಿಗೂ 5% ಎಂದೂ ನಿಗದಿಗೊಳಿಸಲಾಗಿದೆ,

* * * *

ಹಿಂದೂಪುರದಲ್ಲಿ ತಿ. ತಿ. ದೇ. ಕಲ್ಯಾಣ ಮಂಟಪವನ್ನು ರೂ. 7.5 ಲಕ್ಷಗಳ ವೆಚ್ಚದಲ್ಲಿ ನಿರ್ಮಿಸಲು, ಸ್ಥಳೀಯರು ಎರಡು ಎಕರೆ ಸ್ಥಳ ಹಾಗೂ ರೂ. 1. 5. ಲಕ್ಷಗಳ ವಂತಿಗೆಯನ್ನು ನೀಡುವ ಕರಾರಿನೊಡನೆ ತೀರ್ಮಾನಿಸಲಾಯಿತು.



ಪ್ರತಿ ಮಂಗಳವಾರ ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿಗೆ 108 ಸ್ವರ್ಣಕಮಲಗಳ ಹೊಸ 'ಪಾದಪದ್ಮಾರಾಧನೆ'ಯನ್ನು ನಿರ್ವಹಿಸಲು ತೀರ್ಮಾನಿಸಿ ಈ ಅರ್ಜಿತ ಸೇವೆಗೆ 5106–ರೂಗಳ ಶುಲ್ಕವನ್ನು ವಿಧಿಸಿ, ಅರ್ಜಿತಸೇವಾದಾರರಿಗೆ ಹತ್ತು ಮಂದಿ ದರ್ಶನಕ್ಕೆ ಅನುಮತಿ ನೀಡಿ, ಹತ್ತು ವಡೆ, ಹತ್ತು ಲಾಡು, ವಸ್ತ್ರ ಬಹುಮಾನ ನೀಡಲು ತೀರ್ಮಾನಿಸಲಾಯಿತು.

## ಧರ್ಮಕರ್ತರ ಮಂಡಳಿಯ ತೀರ್ಮಾನಗಳು

ಅಮೆರಿಕಾದ ಮಿಸಿಸಿಪ್ಪಿ ಪ್ರಾಂತ್ಯದ ಜಾಕ್‌ಸನ್‌ನ ದೇವಾಲಯಕ್ಕಾಗಿ ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತೀ ಅಮ್ಮನವರ ವಿಗ್ರಹಗಳೇ ಅಲ್ಲದೆ ರಾಮಲಕ್ಷ್ಮಣ, ಹನುಮಂತ, ಕೃಷ್ಣ ಇತ್ಯಾದಿ ವಿಗ್ರಹಗಳನ್ನೂ 48000 ರೂಗಳ ವೆಚ್ಚದಲ್ಲಿ ನಿರ್ಮಿಸಿ, ಉಚಿತವಾಗಿ ನೀಡಲು ತೀರ್ಮಾನಿಸಲಾಯಿತು.

ಅಮೆರಿಕದ ಮೆಸಾಚ್ಯುಸೆಟ್ಸ್ ಪ್ರಾಂತ್ಯದ ವೆಲ್ಲಸ್ಲಿಹಿಲ್ಸ್‌ನ ಆಷ್‌ಲ್ಯಾಂಡಿನಲ್ಲಿ ನ್ಯೂ ಇಂಗ್ಲೆಂಡ್ ಹಿಂದೂ ಟೆಂಪಲ್ ಸೊಸೈಟಿಯವರು ನಿರ್ಮಿಸುತ್ತಿರುವ ಶ್ರೀ ಲಕ್ಷ್ಮಿ ದೇವಾಲಯಕ್ಕೆ 5 ಲಕ್ಷ ರೂಗಳ ಆರಂಭದ ಸಾಲವನ್ನು ನೀಡಲು ತೀರ್ಮಾನಿಸಲಾಯಿತು.

ಅಮೆರಿಕಾದ ಕ್ಯಾಲಿಫೋರ್ನಿಯಾ ಪ್ರಾಂತ್ಯದ ಸ್ಯಾನ್‌ಫ್ರಾನ್ಸಿಸ್ಕೋನ ಎಸ್. ವಿ. ಟೆಂಪಲ್ ಆರ್ಗನೈಸೇಷನ್‌ಗೆ ಅಲ್ಲಿನ ಆಲಯ ನಿರ್ಮಾಣವೆಚ್ಚಗಳಿಗಾಗಿ ರೂ. 110508–80 ಗಳ ಅಧಿಕ ಸಾಲವನ್ನು ಮಂಜೂರು ಮಾಡಿ, ವಿಜಯವಾಡದ ಡಾ॥ ಆರ್. ಶ್ರೀನಿವಾಸಾಚಾರ್ಯ ಅವರನ್ನು ಅಲ್ಲಿಗೆ ಕುಂಭಾಭಿಷೇಕವೇ ಇತ್ಯಾದಿಗಳಿಗಾಗಿ ಕಳುಹಿಸಿಕೊಡಲು ತೀರ್ಮಾನಿಸಲಾಯಿತು.



# ವಾರ್ತಾಲಹರಿ

## ಸಿಡ್ನಿಯಲ್ಲಿ ಶ್ರೀವೇಂಕಟೇಶ್ವರಸ್ವಾಮಿ ಕುಂಭಾಭಿಷೇಕ

ಆಸ್ಟ್ರೇಲಿಯಾದಲ್ಲಿನ ಹಿಂದೂ ಟೆಂಪಲ್ ಸೊಸೈಟಿಯವರಿಂದ ಸಿಡ್ನಿ ನಗರದ ಶ್ರೀವೆಂಕಟೇಶ್ವರಸ್ವಾಮಿ ದೇವಾಲಯದಲ್ಲಿ ಜೂನ್ 30 ರಂದು ಯಶಸ್ವಿಯಾಗಿ, ಹಿಂದೂ ಧಾರ್ಮಿಕ ವಿಧಿಗಳ ಅನ್ವಯ ಕುಂಭಾಭಿಷೇಕ ನಡೆಯಿತು. ತಿ. ತಿ. ದೇವಸ್ಥಾನಗಳ ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀನಾರಾಯಣ ಅವರನ್ನು ಕುಂಭಾಭಿಷೇಕಕ್ಕಾಗಿ ವಿಶೇಷವಾಗಿ ಆಹ್ವಾನಿಸಲಾಗಿದ್ದಿತು. ಸಿಡ್ನಿಯ ಹಿಂದೂ ಟೆಂಪಲ್ ಸೊಸೈಟಿಗೆ ಈ ಹಿಂದೆ ದೇವಾಲಯ ಅಭಿವೃದ್ಧಿ ಕಾರ್ಯಗಳಿಗಾಗಿ ತಿ. ತಿ. ದೇ. ಗಳ ವಿದೇಶೀ ಹಿಂದೂ ದೇವಾಲಯ ನೆರವು ನಿಧಿಯಿಂದ ನೆರವು ನೀಡಿದ್ದುದನ್ನು ಇಲ್ಲಿ ನೆನೆಯಬಹುದು.

## ತಿರುಮಲೆಯ ಪಾದಯಾತ್ರೆಯಲ್ಲಿ ಆಂ. ಪ್ರ. ಮುಖ್ಯಕಾರ್ಯದರ್ಶಿ

ಕಳೆದ ಜೂನ್ 8 ರಂದು ಬೆಳಗ್ಗೆ ಆಂಧ್ರಪ್ರದೇಶದ ಸರ್ಕಾರದ ಮುಖ್ಯಕಾರ್ಯದರ್ಶಿ ಶ್ರೀ ಶ್ರಾವಣಕುಮಾರ್ ಅವರು ತಿರುಪತಿಯಿಂದ ತಿರುಮಲೆಗೆ ಪಾದಯಾತ್ರೆ ನಡೆಸಿ ಶ್ರೀವೆಂಕಟೇಶ್ವರ ಸ್ವಾಮಿಯನ್ನು ಸಂದರ್ಶಿಸಿದರು. ಅವರೊಂದಿಗೆ ಹಲವಾರು ತಿ. ತಿ. ದೇ. ಅಧಿಕಾರಿಗಳೂ ಪಾದಯಾತ್ರೆಯಲ್ಲಿ ಪಾಲುಗೊಂಡರು.

ಸ್ವಾಮಿಯನ್ನು ದರ್ಶಿಸಿದ ಮುಖ್ಯಕಾರ್ಯದರ್ಶಿಯವರು ಕೇಂದ್ರ ಆಸ್ಪತ್ರೆಯನ್ನೂ, ವಿಕಲಾಂಗ ಶಿಕ್ಷಣ ತರಬೇತಿ ಸಂಸ್ಥೆಯನ್ನೂ ಸಂದರ್ಶಿಸಿದರು. ತಿರುಮಲೆಯಲ್ಲಿ 36 ಕೋಣೆಗಳ ಎರಡು ಅತಿಥಿ ಗೃಹಗಳಿಗೆ ಆರಂಭ ಪೂಜೆ ನಡೆಸಿದರು.

## ಅನ್ನಮಾಚಾರ್ಯ ನೃತ್ಯ ಉತ್ಸವ

ಈಚೆಗೆ ತಿರುಪತಿಯ ಅನ್ನಮಾಚಾರ್ಯ ಕಲಾ ಮಂದಿರದಲ್ಲಿ ಇಂಡಿಯನ್ ಬ್ಯಾಲೆ ಥಿಯೇಟರ್‌ನವರು ಅನ್ನಮಾಚಾರ್ಯ ಸಂಕೀರ್ತನೆಗಳನ್ನು ನೃತ್ಯಕ್ಕೆ ಅಳವಡಿಸಿ ಸೊಗಸಾದ ನೃತ್ಯಪ್ರದರ್ಶನವನ್ನು ನೀಡಿದರು. ಚಿತ್ತೂರಿನ ಎಸ್. ಪಿ. ಶ್ರೀ ಆರ್. ಸೀತಾರಾಮರಾಯರ ಅಧ್ಯಕ್ಷತೆಯಲ್ಲಿ ಶ್ರೀ ವೆಂಕಟೇಶ್ವರ ವಿಶ್ವವಿದ್ಯಾನಿಲಯದ ಉಪಕುಲಪತಿ ಶ್ರೀ ಜಿ. ಎಸ್. ರೆಡ್ಡಿ ಅವರು ಮುಖ್ಯ ಅತಿಥಿಗಳಾಗಿ ಆಗಮಿಸಿದ ಈ ಉತ್ಸವದಲ್ಲಿ ಅನ್ನಮಾಚಾರ್ಯ ನೃತ್ಯವಿಭಾಗಕ್ಕೆ ಆರಂಭೋತ್ಸವ ನಡೆಸಲಾಯಿತು. ಅನ್ನಮಾಚಾರ್ಯರ ಕೀರ್ತನೆಗಳ ನೃತ್ಯಾವತರಣಿಕೆಯಲ್ಲಿ ಯಶಸ್ವಿಯಾಗಿ ದುಡಿಯುತ್ತಿರುವ ಇಂಡಿಯನ್ ಬ್ಯಾಲೆ ಥಿಯೇಟರ್‌ನವರನ್ನು ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀನಾರಾಯಣ ಅಭಿನಂದಿಸಿದರು. ಶ್ರೀ ಕಾಮಿಶೆಟ್ಟಿ ಶ್ರೀನಿವಾಸುಲು ಅವರೂ, ಶ್ರೀ ಪುಲಿಕಂಟಿ ಕೃಷ್ಣಾರೆಡ್ಡಿಯವರೂ ಉಪನ್ಯಾಸಗಳನ್ನು ನೀಡಿದರು.

## ತಿರುಮಲೆಯ ಶುಭ್ರತೆ

ತಿರುಮಲೆಯ ಶುಭ್ರತೆಯನ್ನು ವಿದೇಶೀ ನಗರಗಳ ಸ್ಥಾಯಿಯಲ್ಲಿ ಉನ್ನತಮಟ್ಟಕ್ಕೆ ಏರಿಸಬೇಕೆಂದು ವಿದೇಶಪ್ರವಾಸದಿಂದ ಹಿಂದಿರುಗಿದ ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀನಾರಾಯಣ ಅವರು ಪತ್ರಿಕಾಗೋಷ್ಠಿಯಲ್ಲಿ ನುಡಿದರು. ಸಿಂಗಪುರದ ಶುಭ್ರತೆಯನ್ನು ಪ್ರಶಂಸಿಸಿದ ಅವರು ತಿರುಮಲೆಯನ್ನೂ ಅದೇ ರೀತಿ ನೋಡಿಕೊಳ್ಳಲು ಯೋಚಿಸಲಾಗುತ್ತಿದೆಯೆಂದು ನುಡಿಯುತ್ತ, ತಿರುಮಲೆಯ ಹೆಚ್ಚಿನ ನಿವಾಸಿಗಳನ್ನು ತಿರುಪತಿ ಮತ್ತು ಹತ್ತಿರದ ಮಂಗಳಂ ಗ್ರಾಮದ ಸುತ್ತಮುತ್ತಲ ಸ್ಥಳಗಳಿಗೆ ಕಳುಹಿಸಲಾಗುವ ತಿರುಮಲೆಯ ಮಾಸ್ಟರ್ ಪ್ಲಾನ್ ಅನ್ನು ವಿವರಿಸಿದರು. ಅದರಂತೆ ತಿರುಮಲೆಯ ನಿವಾಸಿಗಳಿಗೆ ಹೊರಗೆ ಉಚಿತ ಸ್ಥಳ, ರೂ. 10,000 ಗಳ ಗೃಹನಿರ್ಮಾಣ ಸಾಲವನ್ನು ನೀಡಲಾಗುವುದೆಂದು ತಿಳಿಸಿದರು.

## ಶ್ರೀವೆಂಕಟೇಶ್ವರ ಸ್ವಾಮಿಗೆ ಬಂಗಾರದ ಪಾದರಕ್ಷೆಗಳ ಕಾಣಿಕೆ

ಅಜ್ಞಾತ ಭಕ್ತರೊಬ್ಬರು 396 ಗ್ರಾಂಗಳ ಹರಳುಗಳಿಂದ ಕೂಡಿದ ಬಂಗಾರದ ಪಾದರಕ್ಷೆಗಳನ್ನು ಕಾಣಿಕೆಯಾಗಿ ಸ್ವಾಮಿಗೆ ನೀಡಿದ್ದಾರೆ. ಇದನ್ನು ಉತ್ಸವ ಸಮಯಗಳಲ್ಲಿ ಬಳಸಲಾಗುವುದೆಂದು ಅಧಿಕಾರಿಗಳು ತಿಳಿಸಿದ್ದಾರೆ.

## ತಿರುಮಲೆಗೆ ಪ್ರಮುಖರು

ಜೂನ್ 29 ರಂದು ಕೇಂದ್ರದ ಎಲೆಕ್ಟ್ರಾನಿಕ್ ಸಹಾಯಮಂತ್ರಿ ಶ್ರೀ ಶಿವರಾಜಪಾಟೀಲ್ ಅವರು ಶ್ರೀ ವೆಂಕಟೇಶ್ವರ ಸ್ವಾಮಿಯನ್ನು ಸಂದರ್ಶಿಸಿದರು. ಆಂಧ್ರಪ್ರದೇಶದ ಗ್ರಾಮೀಣಾಭಿವೃದ್ಧಿಯ ಮಂತ್ರಿ ಶ್ರೀ ರಾಜಾಮಣಿಯವರೂ ಅಡವಿ ಶಾಖಾಮಂತ್ರಿ ಮಹಿಪಾಲರೆಡ್ಡಿಯವರೂ ಸಾಂಕೇತಿಕ ವಿದ್ಯಾಶಾಖಾಮಂತ್ರಿ ಶ್ರೀ ಅಯ್ಯನ್ನ ಪಾತ್ರುಡು ಅವರೂ ಪ್ರತ್ಯೇಕ ಪ್ರತ್ಯೇಕವಾಗಿ ಆಗಮಿಸಿ ಸ್ವಾಮಿಯದರ್ಶನ ಮಾಡಿದರು. ಕೇಂದ್ರ



ನಾರಾಯಣವನಂನಲ್ಲಿ ಕಲ್ಯಾಣ ಮಂಟಪ ನಿರ್ಮಿಸಲು ಆಂಧ್ರಪ್ರದೇಶದ ರೆವಿನ್ಯೂಕಾರ್ಯದರ್ಶಿ ಶ್ರೀ ನಾಯರ್ ಅವರು ಶಿಲಾನ್ಯಾಸಮಾಡಿದರು. ತತ್ಸಂಬಂಧದ ಚಿತ್ರಗಳು.

ಮುಂದಿನ ಸಂಚಿಕೆಯಲ್ಲಿ .... .... ....

## ಸಪ್ತಗಿರಿ. ಅಕ್ಟೋಬರ್ — 1985

**ಪಂಚತಂತ್ರ**

— ಡಾ॥ ಎಸ್. ಅನಂತರಂಗಾಚಾರ್

**ಪರಮಾತ್ಮನ ಪಂಚರೂಪಗಳು**

— ಡಿ. ಕೃಷ್ಣ ಅಯ್ಯಂಗಾರ್

**ಅವತಾರಗಳು**

— ಸಿ. ಗೋವಿಂದಾಚಾರ್ಯ

**ಶ್ರೀನಿವಾಸ ವೈಭವ**

— ಬ. ನ. ಗುಂಡೂರಾವ್

**ವಿಠಲ ದೇವಸ್ಥಾನ**

— ಡಾ॥ ಕೆ. ಸರ್ವೋತ್ತಮನ್

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.** ಬೆಲೆ: ರೂ. 1–00 ಮಾತ್ರ

ವಿಶೇಷ ಸೂಚನೆ: ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು. ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ. ವಾರ್ಷಿಕ ಚಂದಾ ರೂ. 12–00 ಮಾತ್ರ. ಹಿಂದಿನ ಚಂದಾದಾರರು ತಮ್ಮ ಚಂದಾ ಕ್ರಮಸಂಖ್ಯೆಯನ್ನು ತಪ್ಪದೆ ಪ್ರತಿ ಕಾಗದಲ್ಲೂ ಬರೆಯಬೇಕು. ಬರೆಯಿರಿ — ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್. ತಿ.ತಿ.ದೇ. ತಿರುಪತಿ.

# ತಿಂಗಳಿನ ಮುಖ್ಯದಿನಗಳು

## ಅಕ್ಟೋಬರ್ 1985

| | | |
|---|---|---|
| 2. | ಬುಧವಾರ | ಗಾಂಧೀಜಯಂತಿ |
| 7. | ಸೋಮವಾರ | ಮಧ್ಯಾಷ್ಟಮಿ |
| 13. | ಭಾನುವಾರ | ಮಹಾಲಯ ಅಮಾವಾಸ್ಯೆ |
| 14. | ಸೋಮವಾರ | ಶ್ರೀ ವೆಂಕಟೇಶ್ವರಸ್ವಾಮಿ ನವರಾತ್ರಿ ಬ್ರಹ್ಮೋತ್ಸವಾರಂಭ |
| 15. | ಮಂಗಳವಾರ | ನವರಾತ್ರಿ ಆರಂಭ |
| 18. | ಶುಕ್ರವಾರ | ಶ್ರೀ ವೆಂಕಟೇಶ್ವರಸ್ವಾಮಿ ಗರುಡೋತ್ಸವ |
| 19. | ಶನಿವಾರ | ಸರಸ್ವತೀಪೂಜೆ |
| 21. | ಸೋಮವಾರ | ದುರ್ಗಾಷ್ಟಮಿ, ಶ್ರೀ ವೆಂಕಟೇಶ್ವರಸ್ವಾಮಿ ರಜತ ರಥೋತ್ಸವ |
| 22. | ಮಂಗಳವಾರ | ಮಹಾನವಮಿ, ಶ್ರೀ ವೆಂಕಟೇಶ್ವರಸ್ವಾಮಿ ನವರಾತ್ರಿ ಬ್ರಹ್ಮೋತ್ಸವ ಅವಭೃತ |
| 23. | ಬುಧವಾರ | ವಿಜಯದಶಮಿ |
| 28. | ಸೋಮವಾರ | ಸಂಪೂರ್ಣ ಚಂದ್ರಗ್ರಹಣ, ಕಪಿಲೇಶ್ವರಸ್ವಾಮಿ ಅನ್ನಾಭಿಷೇಕ, ಸುವರ್ಣಮುಖೀ ತೀರ್ಥ ಮುಕ್ಕೋಟಿ. |

ಗೃಹಖಾತೆಯ ಮಂತ್ರಿ ಶ್ರೀ ಎಸ್.ಬಿ. ಚವ್ಹಾಣರ ಜೂನ್ 28 ರಂದು ಆಗಮಿಸಿ ಸ್ವಾಮಿಯನ್ನು ಸಂದರ್ಶಿಸಿ ಜೂನ್ 29 ರಂದು ಹಿಂದಿರುಗಿದರು. ಆಂಧ್ರದ ಪಂಚಾಯಿತಿ ಶಾಖಾಮಂತ್ರಿ ಶ್ರೀ ಕರಣಂ ರಾಮಚಂದ್ರರಾವ್ ಅವರು ಬುಧವಾರದ ಸಹಸ್ರಕಲಾಶಾಭಿಷೇಕವನ್ನು ದರ್ಶಿಸಿದರು. ಅವರೊಂದಿಗೆ ತಿ. ತಿ. ದೇ ಬೋರ್ಡ್‌ಸದಸ್ಯ ಶ್ರೀ ಟಿ. ರುದ್ರಯ್ಯ ಮತ್ತಿತರ ಅಧಿಕಾರಿಗಳಿದ್ದರು.

ಜೂನ್ 15 ರಂದು ಆಂಧ್ರಪ್ರದೇಶದ ರಾಜ್ಯಪಾಲ ಡಾ॥ ಶಂಕರ ದಯಾಳ ಶರ್ಮ ಅವರು ಸುಪ್ರಭಾತ ಸೇವೆ ನಡೆಸಿದರು. ಅವರೊಂದಿಗೆ ಕೇಂದ್ರ ಮಂತ್ರಿ ಶ್ರೀ ಚಂದೂಲಾಲ್ ಚಂದ್ರಾಕರ್ ಅವರು ಹಾಗೂ ಆಂ. ಪ್ರ. ದೇವಾದಾಯಶಾಖಾಮಂತ್ರಿ ಶ್ರೀ ಯತಿರಾಜ ರಾವ್ ಅವರೂ ಇದ್ದು ನಂತರ ಮಂತ್ರಿಗಳು ಹೊಸ ಕ್ಯೂ ಕಾಂಪ್ಲೆಕ್ಸ್ ಅನ್ನು ಪರಿಶೀಲಿಸಿದರು.

ಜೂನ್ 20 ರಂದು ನೇಪಾಳದ ಸೈನ್ಯಾಧಿಕಾರಿ ಶ್ರೀ ಅರ್ಜುನಸಿಂಗ್ ರಾಣಾ ಅವರು ಸ್ವಾಮಿಯನ್ನು ಸಂದರ್ಶಿಸಿದರು.

ಅದೇ ದಿನ ತಮಿಳುನಾಡು ರಾಜ್ಯಪಾಲ ಶ್ರೀ ಖುರಾನಾ ಅವರು ಸ್ವಾಮಿಯನ್ನು ಸಂದರ್ಶಿಸಿದರು.

ಭಾರತದ ಮುಖ್ಯ ನ್ಯಾಯಾಧೀಶ ಶ್ರೀ ಪಿ. ಎನ್. ಭಗವತಿಯವರು ಜೂನ್ 30 ರಂದು ಸ್ವಾಮಿಯನ್ನು ಆರಾಧಿಸಿದರು.

## ಅಜ್ಞಾತ ಭಕ್ತರಿಂತ ೩.೫ ಲಕ್ಷ ರೂ ಕಾಣಿಕೆ

ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯದ ಹುಂಡಿಯಲ್ಲಿ ಇದೇ ಜುಲೈ 21 ರಂದು ಅಜ್ಞಾತ ಭಕ್ತರೊಬ್ಬರು 100 ರೂಗಳ 35 ಕಂತೆಗಳನ್ನು ಹಾಕಿದ್ದುದು ಕಂಡುಬಂದಿತು. ಇದರ ಒಟ್ಟು ಮೊತ್ತ 3 5 ಲಕ್ಷ ರೂಗಳು ಎಂದು ವರದಿಯಾಗಿದೆ.

## ಒರಿಸ್ಸಾದಲ್ಲಿ ತಿ. ತಿ. ದೇ. ವಿಚಾರಣಾಕೇಂದ್ರ

ಒರಿಸ್ಸಾದ ರಾಜಧಾನಿ ಭುವನೇಶ್ವರದಲ್ಲಿ ತಿ. ತಿ. ದೇ. ವಿಚಾರಣಾಕೇಂದ್ರವನ್ನು ಒರಿಸ್ಸಾದ ಮುಖ್ಯಮಂತ್ರಿ ಶ್ರೀ ಜೆ. ಬಿ. ಪಾಟ್ನಾಯಕ್ ಅವರು ಜೂನ್ 8 ರಂದು ಉದ್ಘಾಟಿಸಿದರು. ತಿ. ತಿ. ದೇ ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀನಾರಾಯಣ ಅವರು ಅಧ್ಯಕ್ಷತೆ ವಹಿಸಿದ್ದರು.



Edited and Published on behalf of the T. T. Devasthanams by K. Subba Rao, M.A., and Printed at T. T. D. Press by M. Vijayakumar Reddy, Manager, T. T. D. Press, Tirupati – 517501.

